DEPARTMENT OF PUBLIC INSTRUCTION, MYSORE

# KANNADA BĀLABŌDHE

PART I

# ಕನ್ನಡ ಬಾಲಬೋಧೆ

೧ ನೆಯ ಭಾಗ

ಚ. ವಾಸುದೇವಯ್ಯ

ಇವರಿಂದ ರಚಿಸಲ್ಪಟ್ಟಿತು



ಕಾವ್ಯಾಲಯ ಪ್ರಕಾಶಕರು : ಜಯನಗರ : ಮೈಸೂರು

# ಉಪಾಧ್ಯಾಯರಿಗೆ

ಬಾಲಬೋಧೆಯೆಂಬ ಈ ಪುಸ್ತಕವು ವಿದ್ಯಾಭ್ಯಾಸದ ಇಲಾಖೆಯ ಸೆಕ್ರೆಟೆರಿಯವರ ಆಜ್ಞಾನುಸಾರವಾಗಿ ಮಕ್ಕಳ ತರಗತಿಯ A ವಿಭಾಗದಲ್ಲಿ ಓದುವ ಬಾಲರ ಉಪಯೋಗಾರ್ಥವಾಗಿ ಬರೆಯಲ್ಪಟ್ಟಿರುತ್ತದೆ.

ಪ್ರಕೃತದಲ್ಲಿ ಮಕ್ಕಳು ಮೊದಲು ಅಕ್ಷರಗಳನ್ನೂ ಆಮೇಲೆ ಅಕ್ಷರಸಂಯೋಜನವನ್ನೂ ಕಡೆಯವರೆಗೂ ಕಲಿತು ಆ ಬಳಿಕ ಮಾತುಗಳನ್ನು ಓದುವುದಕ್ಕೆ ಪ್ರಾರಂಭ ಮಾಡುತ್ತಾರೆ. ಈ ರೀತಿಯಾಗಿ ಅಕ್ಷರಗಳನ್ನೂ, ಅವು ಒಂದರ ಸಂಗಡ ಒಂದು ಸಂಯೋಜನವಾಗುವಾಗ ಹೊಂದುವ ಬೇರೆ ಬೇರೆಯ ರೂಪಗಳನ್ನೂ ಕಲಿಯಬೇಕಾದರೆ, ಬಹಳ ಕಾಲ ಹಿಡಿಯುವುದು. ಅಷ್ಟು ಕಾಲವೂ ಆ ಸಂಜ್ಞೆಗಳಿಂದಾಗುವ ಪ್ರಯೋಜನವೇನೋ ಅದುಮಟ್ಟಿಗೆ ಅವರಿಗೆ ಗೊತ್ತಾಗುವುದಿಲ್ಲ. ತಿಳಿಯದ ವಿಷಯದಲ್ಲಿ ಅಕ್ಕರೆ ಹುಟ್ಟದಿರುವುದು ಸ್ವಾಭಾವಿಕವಾದುದರಿಂದ ಸಾಧಾರಣವಾಗಿ ಅಕ್ಷರಾಭ್ಯಾಸಕಾಲದಲ್ಲಿ ಮಕ್ಕಳು ಪಾಠದ ಮೇಲೆ ಮನಸ್ಸಿಡುವುದಿಲ್ಲ. ಮಕ್ಕಳು ಅಕ್ಷರಗಳು ಬರುವುದಕ್ಕೆ ಮುಂಚೆಯೇ ಅನೇಕ ಮಾತುಗಳನ್ನು ಕಲಿತಿರುವರಾದ ಕಾರಣ, ಅಕ್ಷರಗಳು ಅವರಾಡುವ ಮಾತುಗಳನ್ನು ಬರೆಹ ಮೂಲಕವಾಗಿ ತಿಳಿಸುವುದಕ್ಕೆ ಮಾಡಿಕೊಂಡ ಗುರುತುಗಳೆಂದು ಮೊದಲಿಂದಲೂ ಅವರ ಅನುಭವಕ್ಕೆ ಬರುವಂತೆ ಮಾಡಿದಲ್ಲಿ ಅವರಿಗೆ ಅಕ್ಷರಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ ಹುಟ್ಟುವುದು ಮಾತ್ರವೇ ಅಲ್ಲದೆ ಅತ್ಯಲ್ಪಕಾಲದಲ್ಲಿಯೇ ಅವುಗಳನ್ನು ಕಲಿಯಬಹುದೆಂದು ಸಹ ತೋರುತ್ತದೆ. ಆದರೆ ಈ ರೀತಿಯಾಗಿ ಅಕ್ಷರಾಭ್ಯಾಸವನ್ನು ಮಾಡಿಸಬೇಕಾದರೆ, ಪಾಠಕ್ರಮವನ್ನು ಹಿಡಿದು ಅಕ್ಷರಗಳನ್ನು ಹೇಳಿಕೊಡುವುದಕ್ಕಾಗುವುದಿಲ್ಲ. ಯಾಕೆಂದರೆ ಯಾವ ಅಕ್ಷರಗಳಿಂದ ಮಕ್ಕಳು ಸಾಧಾರಣವಾಗಿ ಬಳಸುವ ಮಾತುಗಳಾಗಬಹುದೋ ಆ ಅಕ್ಷರಗಳನ್ನೇ ಮೊದಲು ಕಲಿಸಬೇಕಾಗುವುದು. ಹೀಗೆ ಅಕ್ಷರಗಳನ್ನು ಕಲಿಸಿಕೊಟ್ಟಲ್ಲಿ ಹುಡುಗರಿಗೆ ಅಕಾರಾದಿಯಾಗಿ ಕ್ರಮದಿಂದ

ಅಕ್ಷರಗಳು ಬರುವುದಕ್ಕೆ ಮಾರ್ಗವಿಲ್ಲದೆ ಹೋಗುವುದೆಂದು ಕೆಲವರು ಶಂಕಿಸಬಹುದು. ಪರಂತು ಹಾಗೆ ಶಂಕಿಸುವುದಕ್ಕೆ ನಿಮಿತ್ತವಿಲ್ಲ. ಯಾಕೆಂದರೆ– ಯಾವ ಕ್ರಮದಿಂದಲೇ ಆಗಲಿ ಮಕ್ಕಳಿಗೆ ಅಕ್ಷರಗಳು ಬಂದ ಬಳಿಕ ಅವುಗಳನ್ನು ಪಾಠಕ್ರಮವಾಗಿ ಹೇಳುವುದನ್ನು ಕಲಿಸಬಹುದು; ಆಗ ಅದನ್ನು ಕಲಿಸುವುದು ಸುಲಭವಾಗಿ ಕೂಡ ಇರುವುದು.

ಈ ಪುಸ್ತಕದ ಪ್ರಕಾರ ಅಕ್ಷರಗಳನ್ನು ಕಲಿಸಬೇಕಾದ ಕ್ರಮ ಹೇಗೆಂದರೆ— ಉಪಾಧ್ಯಾಯರು ಮಕ್ಕಳನ್ನು ಕುರಿತು, 'ನೀವು ಆಟ ಆಟವೆಂದು ಸಾರಿ ಸಾರಿಗೂ ಹೇಳುತ್ತಲೇ ಇರುತ್ತೀರಷ್ಟೆ, ಅದನ್ನು ಬರೆಯುವ ಬಗೆಯನ್ನು ತೋರಿಸುತ್ತೇನೆ ನೋಡಿ' ಎಂದುಪಕ್ರಮಿಸಿ, ೧ನೆಯ ಪಾಠದಲ್ಲಿರುವಂತೆ ಆಕಾರ ಟಕಾರಗಳನ್ನು ಕಪ್ಪುಹಲಗೆಯ ಮೇಲೆ ಬರೆದು ಈ ಗುರುತಿಗೆ 'ಆ' ಎಂದು ಹೆಸರು, ಈ ಗುರುತಿಗೆ 'ಟ' ಎಂದು ಹೆಸರೆಂದು ಆಯಾ ಅಕ್ಷರಗಳನ್ನು ತೋರಿಸಿ ಹೇಳಬೇಕು. ಆಮೇಲೆ ಒಂದೊಂದು ಅಕ್ಷರವನ್ನೇ ತೋರಿಸಿ ಅದರ ಹೆಸರನ್ನು ಕೇಳಬೇಕು, ಅಕ್ಷರದ ಹೆಸರನ್ನು ಹೇಳಿ 'ಅದನ್ನು ತೋರಿಸಿ' ಎಂದು ಕೇಳಬೇಕು. ಹೀಗೆ ಕೆಲವು ಸಾರಿ ಮಾಡಿದರೆ, ಹುಡುಗರಿಗೆ ಅಕ್ಷರವನ್ನು ಗುರುತು ಹಿಡಿಯುವುದಕ್ಕೆ ಬರುವುದು. ಈಗ ಅಕ್ಷರಗಳೆರಡನ್ನೂ ಕ್ರಮವಾಗಿ ಒಂದರ ಹತ್ತಿರ ಒಂದನ್ನು ಬರೆದು, 'ಅದನ್ನು ಓದಿ' ಎಂದು ಹೇಳಬೇಕು. ಅವರು ತಡವರಿಸಿಕೊಂಡು ಓದುವ ಪಕ್ಷಕ್ಕೆ, ಉಪಾಧ್ಯಾಯರು ಅದನ್ನು ಸರಿಯಾಗಿ ಓದಿ ಹೇಳಬೇಕು. ಆ ಮೇಲೆ ಪುಸ್ತಕವನ್ನು ತೆಗೆಯಿಸಿ, ಅದರಲ್ಲಿ ಆಕಾರ ಟಕಾರಗಳನ್ನು ತೋರಿಸಿ ಎಂದು ಕೇಳಬೇಕು. ಹುಡುಗರು ಅಕ್ಷರಗಳನ್ನು ತೋರಿಸಿದ ಬಳಿಕ, ಅವುಗಳ ಕೆಳಗೆ ಕೊಟ್ಟಿರುವ ಮಾತುಗಳನ್ನು ಅವರಿಂದಲೇ ಓದಿಸಿ, ತಪ್ಪಿದ ಕಡೆ ತಿದ್ದಿ ಆ ಮಾತುಗಳ ಸರಿಯಾದ ಉಚ್ಚಾರಣೆಯನ್ನು ಕಲಿಸಬೇಕು. ಹೀಗೆಲ್ಲ ಮಾಡುವುದರಿಂದ ಹುಡುಗರಿಗೆ ಅಕ್ಷರಗಳನ್ನು ಗುರುತುಹಿಡಿಯುವುದಕ್ಕೆ ಮಾತ್ರ ಬಂದಂತಾಗುವುದು. ಈಗ ಅವುಗಳನ್ನು ಬರೆಯುವ ರೀತಿಯನ್ನು ತೋರಿಸಬೇಕು. ಇದಕ್ಕಾಗಿ ಉಪಾಧ್ಯಾಯರು ಇನ್ನೊಂದು ಸಾರಿ ಕಪ್ಪುಹಲಗೆಯ ಮೇಲೆ

ಅಕ್ಷರಗಳನ್ನು ಬರೆಯಬೇಕು. ಹಾಗೆ ಬರೆಯುವಾಗ ಅಕ್ಷರವನ್ನು ಎಲ್ಲಿ ಪ್ರಾರಂಭಿಸಬೇಕೊ, ಎಲ್ಲಿ ಮುಗಿಸಬೇಕೊ, ಅದನ್ನು ಹುಡುಗರಿಗೆ ಹೇಳಿಕೊಡಬೇಕು. ಆ ಬಳಿಕ ಆ ಅಕ್ಷರಗಳನ್ನು ನೆಲದ ಮೇಲೆ ಸೀಮೆಯ ಸುಣ್ಣದಿಂದ ಅವರ ಮುಂದೆ ಬರೆದು, ಕೈಗೆ ಹುಣಿಸೆಬೀಜಗಳನ್ನು ಕೊಟ್ಟು, 'ಅಕ್ಷರಗಳ ರೇಖೆಯ ಮೇಲೆ ಒಂದೊಂದಾಗಿ ಇಡುತ್ತಾ ಬನ್ನಿ' ಎಂದು ಹೇಳಬೇಕು. ಹಾಗೆ ಒಂದೆರಡು ಸಾರಿ ಇಟ್ಟ ಬಳಿಕ, ಹುಡುಗರು ಬರೆದ ಅಕ್ಷರಗಳನ್ನು ಅಳಿಸಿ ಅಕ್ಷರಗಳ ಹಾಗೆ ಹುಣಿಸೆಬೀಜಗಳನ್ನಿಡಲು ಯತ್ನಿಸಬೇಕು. ಹೀಗೆ ಮಾಡುವುದರಿಂದ ಅಕ್ಷರಗಳ ಆಕೃತಿಯು ಹುಡುಗರ ಮನಸ್ಸಿನಲ್ಲಿ ಚೆನ್ನಾಗಿ ನಾಟುವುದು. ಆಮೇಲೆ ಉಪಾಧ್ಯಾಯರು ಕಪ್ಪುಹಲಗೆಯ ಮೇಲೆ ಬರೆದ ಅಕ್ಷರಗಳನ್ನು ನೋಡಿಕೊಂಡು ಹುಡುಗರು ತಮ್ಮ ತಮ್ಮ ಹಲಗೆಯ ಮೇಲೆ ಬರೆಯಬೇಕು. ಬರೆವಣಿಗೆಗಾಗಿ ನಿಯಮಿಸಿರುವ ಕಾಲದಲ್ಲಿ, ಮೇಲೆ ಹೇಳಿರುವ ಮೇರೆಗೆ ಹುಡುಗರಿಗೆ ಅಕ್ಷರಗಳನ್ನು ಬರೆಯುವುದನ್ನು ಕಲಿಸಬಹುದು.

ಮೇಲೆ ಹೇಳಿರುವಂತೆ ದಿವಸಕ್ಕೆರಡಕ್ಷರಗಳ ಮೇರೆಗೆ ಅಕ್ಷರಾಭ್ಯಾಸ ಮಾಡಿಸಿದಲ್ಲಿ ೠ ಐ ಙ ಞ ಇವುಗಳ ವಿನಾ ಎಲ್ಲಾ ಅಕ್ಷರಗಳು ೨೨ ಪಾಠಗಳಲ್ಲಿ ಮುಗಿಯುವುವು. ಈ ಪಾಠಗಳಾದ ಮೇಲೆ ಹುಡುಗರಿಂದ ಅಕಾರಾದಿಯಾಗಿ ಕ್ರಮವಾಗಿ ಅಕ್ಷರಗಳನ್ನು ಓದಿಸಬೇಕು. ಹಾಗೆ ಅವರು ಓದುವಾಗ ಮೇಲೆ ಹೇಳಿದ ಅಕ್ಷರಗಳನ್ನು ಅವರಿಗೆ ಹೇಳಿಕೊಡಬೇಕು. ಪರಂತು ಈ ಉಳಿದ ಅಕ್ಷರಗಳು ಹುಡುಗರಿಗೆ ಬಂದು ಅಕ್ಷರಗಳೆಲ್ಲಾ ಪಾಠಕ್ರಮವಾಗಿ ಬಾಯಿಗೆ ಬರುವವರೆಗೂ ಅವರು ಅಕ್ಷರಗಳನ್ನೇ ಓದುತ್ತಾ ಇರಲು ಆವಶ್ಯಕವಿಲ್ಲ. ವರ್ಣಮಾಲೆಯ ತರುವಾಯ ಬರುವ ಪಾಠಗಳನ್ನು ಓದಿಕೊಂಡು ಹುಡುಗರು ಕಾಗುಣಿತವನ್ನು ಪ್ರಾರಂಭಿಸಬೇಕು. ಪುಸ್ತಕದಲ್ಲಿ ತೋರಿಸಿರುವಂತೆ ಅಕಾರ ಮೊದಲಾದ ಅಕ್ಷರಗಳು ಇತರ ಅಕ್ಷರಗಳ ಸಂಗಡ ಸೇರುವಾಗ ಅವುಗಳು ಹೊಂದುವ ರೂಪವನ್ನು ಕಪ್ಪುಹಲಗೆಯ ಮೇಲೆ ಬರೆದು ತೋರಿಸಬೇಕಲ್ಲದೆ ತಲೆಕಟ್ಟು, ಇಳಿ, ಗುಡಿಸು ಮೊದಲಾದ ಸಂಜ್ಞೆಗಳನ್ನು ಅವರಿಗೆ ಹೇಳಿಕೊಡ

ಬೇಕು. ಈ ರೀತಿಯಾಗಿ ಕಕಾರಕ್ಕೆ ಇಳಿ ಮೊದಲಾದುವನ್ನು ಕೊಟ್ಟು ಅದನ್ನು ಉಚ್ಚರಿಸುವುದನ್ನು ಚೆನ್ನಾಗಿ ಕಲಿಸಿ, ಆ ಬಳಿಕ 'ಗ'ಕ್ಕೆ ಇಳಿ ಕೊಟ್ಟರೇನಾಗುತ್ತದೆ? 'ಜ'ಕ್ಕೆ ಕೊಟ್ಟರೊ? ಎಂದು ಆ ಪಾಠದಲ್ಲಿ ಕೊಟ್ಟಿರುವ ಅಕ್ಷರಗಳನ್ನು ಕುರಿತು ಪ್ರಶ್ನೆ ಮಾಡಿ ಹುಡುಗರಿಂದ ಉತ್ತರವನ್ನು ಹೊರಡಿಸಬೇಕು. ಅನಂತರ ಪುಸ್ತಕದಲ್ಲಿರುವ ಮೇರೆಗೆ ಮೊದಲು ಅಕ್ಷರಗಳನ್ನೂ ಆಮೇಲೆ ಮಾತುಗಳನ್ನೂ ಆಮೇಲೆ ವಾಕ್ಯಗಳನ್ನೂ ಹುಡುಗರಿಗೆ ಕಲಿಸಬೇಕು. ವಾಕ್ಯಗಳಾದ ಮೇಲೆ ಕೆಲವು ಕಠಿನಶಬ್ದಗಳನ್ನು ಕೊಟ್ಟಿದೆ. ಅವುಗಳಾಗಿರುವ ರೀತಿಯನ್ನು, ಅವುಗಳನ್ನು ಉಚ್ಚರಿಸುವುದನ್ನು ಹುಡುಗರಿಗೆ ಕಲಿಸಬೇಕು. ಹೀಗೆಯೇ ಪ್ರತಿ ಪಾಠವನ್ನೂ ಮಾಡಬೇಕು. ಇದೇ ಕ್ರಮವನ್ನನುಸರಿಸಿ ವ್ಯಂಜನಕ್ಕೆ ವ್ಯಂಜನವನ್ನು ಕೂಡಿಸುವುದನ್ನೂ, ಹಾಗೆ ಕೂಡಿಸಿದ ವ್ಯಂಜನಗಳನ್ನು ಉಚ್ಚರಿಸುವುದನ್ನೂ ಕಲಿಸಬೇಕು. ಅಂತು ಹುಡುಗರಿಗೆ ಒಂದು ಪಾಠವು ಚೆನ್ನಾಗಿ ತಿಳಿದಲ್ಲದೆ ಮುಂದಿನ ಪಾಠಕ್ಕೆ ಹೋಗಕೂಡದು. ಈ ಪುಸ್ತಕದಲ್ಲಿರುವ ಪದ್ಯಗಳನ್ನೂ ಹಾಡುಗಳನ್ನೂ ಪಾಠದ ಪಟ್ಟಿಯಲ್ಲಿ ನಿಯಮಿಸಿರುವ ಹೊತ್ತಿನಲ್ಲಿ ಬಾಯಿಪಾಠವಾಗಿ ಹೇಳಿಕೊಡಬೇಕು. ಹುಡುಗರಿಗೆ ಅಕ್ಷರಜ್ಞಾನವುಂಟಾದ ಮೇಲೆಯೇ ಇವುಗಳನ್ನು ಪ್ರಾರಂಭ ಮಾಡಬೇಕೆಂದು ತಿಳಿಯಕೂಡದು. ಉಕ್ತಲೇಖನಕ್ಕಾಗಿ ಕೆಲವು ಮಾತುಗಳನ್ನು ಕೊಟ್ಟಿದೆ. ನಿಯಮಿತಕಾಲದಲ್ಲಿ ಅವುಗಳನ್ನು ಹೇಳಿ ಬರೆಯಿಸಬೇಕು.

**ಚ. ವಾ.**

# ಕನ್ನಡ ಬಾಲಬೋಧೆ

## ೧ನೆಯ ಪಾಠ.

ಆ ಟ

ಆಟ. ಆ ಆಟ.

## ೨ನೆಯ ಪಾಠ.

ಈ ಗ

ಈಗ ಆಗ

ಈಗ ಈ ಆಟ. ಆಗ ಆ ಆಟ.

## ೩ನೆಯ ಪಾಠ.

ಊ ಓ

ಊಟ. ಓಟ.

ಆಗ ಊಟ. ಈಗ ಓಟ.

## ೪ನೆಯ ಪಾಠ.

ಮ ರ

ಮರ. ಮಗ. ಈ ಮರ. ಆ ಮರ.

## ೫ನೆಯ ಪಾಠ.

ಅ ಸ

ಅರ. ಸರ. ರಸ. ಅರಸ. ಸಮ. ಗರಗಸ.

## ೬ನೆಯ ಪಾಠ.

ಕ ಡ

ಕಡ. ಕಸ. ಕಡಗ. ಕರಟ. ಗಡಗಡ.

## ೭ನೆಯ ಪಾಠ.

ದ ನ

ದನ. ಕದ. ಆ ದನ. ಮರದ ಕದ.
ಅರಸನ ಮಗ.

## ೮ನೆಯ ಪಾಠ.

ಇ ವ

ಇವನ. ಅವನ. ಇವರ. ಅವರ. ದವನ

ಇವನ ದನ. ಅವನ ಸರ. ಅವರ ಮಗ.

---

## ೯ನೆಯ ಪಾಠ.

ಬ ಳ

ಬಡವ. ಬಸವ. ಬಳಗ. ಅವಳ. ಕವಳ.

ಅವಳ ಕಡಗ.

---

## ೧೦ನೆಯ ಪಾಠ.

ಹ ಣ

ಹಣ. ಕಣ. ಹವಳ. ಬಹಳ. ಬರಹ.

ಬಹಳ ಹಣ. ಹವಳದ ಸರ.

---

## ೧೧ನೆಯ ಪಾಠ.

ಉ ಒ

ಉದಕ. ಉರಗ. ಒರಟು.

ಒಣ ಮರ. ಒಳ ಕದ. ಆ ಅಗಸ.

## ೧೨ನೆಯ ಪಾಠ.

ಜ ಚ

ಜನ. ಜಗಳ. ಕವಚ. ಕಣಜ.

ಅವನ ಕವಚ. ಇವರ ಜಗಳ.

## ೧೩ನೆಯ ಪಾಠ.

ತ ಥ

ತಡ. ರಥ. ಆತನ. ಈತನ. ಥಳಥಳ.

ಆತನ ಮಗ. ಈತನ ಹಣ. ಅರಸನ ರಥ.

## ೧೪ನೆಯ ಪಾಠ.

# ಪ ಠ

ಪಟ. ಬಳಪ. ಮಠ. ಠಣಠಣ.

ಅವನ ಮಠ. ಇವನ ಬಳಪ.

---

## ೧೫ನೆಯ ಪಾಠ.

# ಫ ಲ

ಫಲ. ಬಲ. ಆಲ. ಅಗಲ. ಓಲಗ.

ಆಲದ ಮರ. ಆ ಮರದ ಫಲ.

---

## ೧೬ನೆಯ ಪಾಠ.

# ಭ ಯ

ಭಯ. ಜಯ. ಪಯಣ. ಸಮಯ.

ಅರಸನ ಭಯ. ಪಯಣದ ಸಮಯ.

---

## ೧೭ನೆಯ ಪಾಠ.

ಎ ಏ

ಎಡ. ಏಕ. ಎಡಬಲ.

## ೧೮ನೆಯ ಪಾಠ.

ಋ ಘ ಝ

ಋಣ. ಘನ. ಘಟ. ಝಣಝಣ.

## ೧೯ನೆಯ ಪಾಠ.

ಔ ಷ ಧ

ಔಷಧ. ಔತಣ. ಔಡಲ. ಧನ. ಧಣಧಣ.

## ೨೦ನೆಯ ಪಾಠ.

ಛ ಢ

ಛಟಛಟ. ಢಣಢಣ.

## ೨೧ನೆಯ ಪಾಠ.

# ಅಂ ಕಂ ಗಂ ಪಂ ರಂ ಸಂ

ಅಂಗಳ. ಕಂದ. ಗಂಧ. ಪಂಜರ.

ರಂಗ. ಸಂಗಡ.

---

## ೨೨ನೆಯ ಪಾಠ.

# ಶ ಖ

ಶಂ

ಶಂಖ. ಶಂಕರ. ಈ ಶಂಖ ರಂಗನ ಶಂಖ.

ಅವನ ಮಗ ಶಂಕರ.

---

# ತಃ ಯಃ

ಅಂತಃಕರಣ. ಅಯಃಖಂಡ.

---

## ಅಕ್ಷರಮಾಲೆ.

ಅ ಆ ಇ ಈ ಉ ಊ

ಋ ೠ ಎ ಏ ಐ

ಒ ಓ ಔ ಅಂ ಅಃ

ಕ ಖ ಗ ಘ ಙ

ಚ ಛ ಜ ಝ ಞ

ಟ ಠ ಡ ಢ ಣ

ತ ಥ ದ ಧ ನ

ಪ ಫ ಬ ಭ ಮ

ಯ ರ ಲ ವ

ಶ ಷ ಸ ಹ ಳ



## ೨೩ನೆಯ ಪಾಠ.

| | | | |
|---|---|---|---|
| ಆಟ. | ಆಗ. | ಏಕ. | ಕಡ. |
| ಊಟ. | ಈಗ. | ಜನ. | ಕದ. |
| ಓಟ. | ಎಡ. | ಹಣ. | ಕಸ. |

## ೨೪ನೆಯ ಪಾಠ.

| | | | |
|---|---|---|---|
| ದನ. | ಪಟ. | ಸರ. | ಭಯ. |
| ಧನ. | ಮಠ. | ರಸ. | ಬಲ. |
| ಜಯ. | ಮರ. | ಸಮ. | ಫಲ. |
| ಕಂದ. | ರಂಗ. | ಶಂಖ. | ಗಂಧ. |

## ೨೫ನೆಯ ಪಾಠ.

| | | | |
|---|---|---|---|
| ಅಗಲ. | ಅವನ. | ಅವಳ. | ಓಲಗ. |
| ಅಗಸ. | ಇವನ. | ಉದಕ. | ಔತಣ. |
| ಅರಸ. | ಇವರ. | ಒರಟ. | ಔಷಧ. |

## ೨೬ನೆಯ ಪಾಠ.

ಕಡಗ. ಕವಚ. ಹವಳ. ಬಡವ.

ಕಣಜ. ಕವಳ. ಬಹಳ. ಬಳಪ.

ಕರಟ. ಜಗಳ. ಪಯಣ. ಬಸವ.

ಸಮಯ.

## ೨೭ನೆಯ ಪಾಠ.

ಗರಗಸ. ಛಟಛಟ. ಢಣಢಣ. ಗಡಗಡ.

ಝಣಝಣ. ಥಳಥಳ. ಧಣಧಣ.

ಶಂಕರ. ಸಂಗಡ. ಪಂಜರ. ಅಂಗಳ.

## ೨೮ನೆಯ ಪಾಠ.

ಅ ⁻ ಆ ಾ

ಕ ಕಾ

ಗಗಾ ದದಾ ಬಬಾ ಶಶಾ

ತತಾ ಪಪಾ ರರಾ ಹಹಾ

ತಾತ. ಪಾಠ. ಶಾಮ. ಬಾ.

ದಾರ. ರಾಮ. ಹಾರ. ತಾ.

ಈ ಪಾಠ. ತಾತ ಬಾ. ಪಟಾ ತಾ.

ಶಾಮನ ಹಾರ. ಬಾ ಶಾಮ. ಪಟದ ದಾರ.

ತಳ. ತಾಳ. ಪಟ. ಪಾಠ.

**ಹೇಳಿ ಬರೆಯಿಸಿ:—**

ಜಯ. ಮಠ. ಝಳ. ರಥ. ತಾತ. ರಾಮ.

## ೨೯ನೆಯ ಪಾಠ.

ಅ ‍ ಆ ಾ

ಖಖಾ ಜಜಾ ಟಟಾ ಯಯಾ

ಘ ಘಾ ಝ ಝಾ ಮ ಮಾ ಲ ಲಾ

ಜಾಣ. ಯಾವ. ಯಾರ. ಮಾವ. ಮಾಧವ.

ಯಾರ ಮಾವ ? ಮಾಧವ ಜಾಣ.

ಯಾವ ಪಟ ? ಯಾರ ಮಾವ ಜಾಣ ?

ಬಲ. ಬಾಲ. ಲಾಗ. ಗಾಣ.

**ಹೇಳಿ ಬರೆಯಿಸಿ :—**

ಹಠ. ಕಾಲ. ಮಾನ. ಸಾಲ. ಶಾಮ.

## ೩ನೆಯ ಪಾಠ.

ಇ ಿ ಈ ೀ

ಕಿ ಕೀ

ಗಿ ಗೀ ಡಿ ಡೀ ತಿ ತೀ ಬಿ ಬೀ

ಚಿ ಚೀ ಣಿ ಣೀ ದಿ ದೀ ಯಿ ಯೀ

ರಿ ರೀ ಲಿ ಲೀ ಹಿ ಹೀ ಳಿ ಳೀ

ಗಿಣಿ. ಹಿಡಿ. ನಾಯಿ. ಚೀಟಿ. ಅಂಗಿ.

ಇಲಿ. ಮರಿ. ತಾಯಿ. ದೀಪ. ಬಂಡಿ.

ರಾಗಿ. ಗಾಲಿ. ಚೀಲ. ಚಳಿ.

ರಾಗಿಯ ಚೀಲ. ಗಿಣಿಯ ಮರಿ.

ಮರಿಯ ತಾಯಿ. ಇಲಿ, ಇಲಿ !

ದೀಪಾ ಹಿಡಿ. ಈಗ ಚಳಿ.

ಚೀಟಿಯ ಅಂಗಿ. ಬಂಡಿಯ ಗಾಲಿ.

ನಾಯಿಯ ಬಾಲ.

ದಿಟ. ದೀಪ. ಬಿಗಿ. ಬೀಗ. ಲಾಲಿ.

ನಗಾರಿ. ಬಾವಲಿ.

**ಹೇಳಿ ಬರೆಯಿಸಿ:—**

ಭಯ. ಕದ. ಕಂದ. ರಂಗ. ಫಲ. ಏಣಿ.

## ೩೧ನೆಯ ಪಾಠ.

ಉ ು ಊ ೂ

ಕು ಕೂ

ಋ ೃ ೠ ೄ

ಕೃ ಕೄ

ಗು ಗೂ ತು ತೂ ನು ನೂ

ಡು ಡೂ ದು ದೂ ಪು ಪೂ

ರು ರೂ ಸು ಸೂ

ಲು ಲೂ ಹು ಹೂ

ಕುರಿ. ಇದು. ಆಡು. ಗುಂಡು.

ಪುರಿ. ಅದು. ಗೂಡು. ದಾಂಡು.

ದೂರ. ಯಾರು? ನೀನು. ತುಂಟ.

ಕುರಿಯ ಹಿಂಡು. ಪುರಿಯ ಅಂಗಡಿ.

ದೀಪದ ಗೂಡು. ತುಂಟ ನಾಯಿ.

ದೂರ ಇರು. ನೀನು ಯಾರು?

ಇದು ಗುಂಡು. ಅದು ದಾಂಡು.

ನೀನು ಆಡು.

ಮುರು. ಮೂರು. ಹುಳು.

ಹಸು. ಕೂಗು. ಹೂಳು.

ಗುಂಡು. ದುಃಖ. ಕೃಶ.

ತುಂಡು. ಪುನಃ. ದೃಢ.

**ಹೇಳಿ ಬರೆಯಿಸಿ:—**

ಓಣಿ. ಗಿಣಿ. ಹುಳಿ. ಗಿಡ. ಇಂದು. ಅಂದು.

---

## ೩೨ನೆಯ ಪಾಠ.

ಎ ೆ ಏ ೇ ಐ ೈ

ಕೆ ಕೇ ಕೈ

ತೆ ತೇ ತೈ ಬೆ ಬೇ ಬೈ

ದೆ ದೇ ದೈ ರೆ ರೇ ರೈ

ನೆ ನೇ ನೈ ಹೆ ಹೇ ಹೈ

ಪೆ ಪೇ ಪೈ ಳೆ ಳೇ ಳೈ

ಕೆನೆ. ಯಾಕೆ. ಬಳೆ. ಬಂದೆ.

ಕೆರೆ. ಚಾಪೆ. ಮಳೆ. ಬೇಕು.

ಬೇಡ. ಕೈ.

ಕೇಳು. ಮೈ.

ಕೆನೆ ಹಾಲು. ಅಳ ಬೇಡ.

ಚಾಪೆ ಹಾಸು. ಕೈ ಮುಗಿ.

ಮಳೆ ಬಂತು. ರಾಗಿಯ ಪೈರು.

ಕೈ ಬಳೆ. ಯಾಕೆ ಬಂದೆ?

ಕೆರೆಯ ನೀರು. ಏನು ಬೇಕು?

ಏನು ಕೇಳು? ಮೈ ನವೆ.

ಕೆಡು. ಕೇಡು. ತೆರು. ತೇರು.

ಬೆಳೆ. ಬೇಳೆ. ಮೇಘ.

**ಹೇಳಿ ಬರೆಯಿಸಿ:—**

ನೆಲ. ಒಲೆ. ಕಥೆ. ಮೇಕೆ. ಸಂತೆ. ಕಂತೆ.



## ೩೩ನೆಯ ಪಾಠ

ಒ ೊ ಓ ೋ ಔ ೌ

ಕೊ ಕೋ ಕೌ

ಗೊ ಗೋ ಗೌ ನೊ ನೋ ನೌ

ಜೊ ಜೋ ಜೌ ಬೊ ಬೋ ಬೌ

ತೊ ತೋ ತೌ ಮೊ ಮೋ ಮೌ

ದೊ ದೋ ದೌ ಹೊ ಹೋ ಹೌ

ಕೊಡು. ಕೊಡೆ. ಕೊಂಟು.

ಕೊಂಬು. ಗೊನೆ. ದೊರೆ.

ಹೊಲ. ಕೋತಿ. ಅಗೋ. ಗೋಲಿ.

ಜೋಕೆ. ತೋಟ. ದೋಸೆ. ಹೋತ.

ಗೌಡ.

ಹೊಸ ಗೋಲಿ. ಗೋಲಿ ಆಡು.

ದೋಸೆ ಕೊಡು. ಅಗೋ ಕೋತಿ.

ಕೊಡೆ ಹಿಡಿ. ದೋಸೆ ಜೋಕೆ.

ದೊರೆಯ ಮಗ. ಗೌಡನ ಹೊಲ.

ಬಾಳೆಯ ಗೊನೆ. ಹೋತನ ಕೊಂಬು.

ತೊಡು. ತೋಡು. ಮೊರೆ. ಮೋರೆ.

ಸೊನೆ. ಸೋನೆ. ಗೌರಿ. ಚೌಕ.

**ಹೇಳಿ ಬರೆಯಿಸಿ :—**

ಹೊಲ. ಕೊಳ. ಕೋಣ. ಸೌದೆ. ದೊಂಬ.

ಹೊಗೆ. ಹೊಂಗೆ.



| | | | | | | | |
|---|---|---|---|---|---|---|---|
| ಅ | ಆ | ಇ | ಈ | ಉ | ಊ | ಋ | ೠ |
| - | ಾ | ಿ | ೀ | ು | ೂ | ೃ | ೄ |
| ಕ | ಕಾ | ಕಿ | ಕೀ | ಕು | ಕೂ | ಕೃ | ಕೄ |
| ಖ | ಖಾ | ಖಿ | ಖೀ | ಖು | ಖೂ | ಖೃ | ಖೄ |
| ಗ | ಗಾ | ಗಿ | ಗೀ | ಗು | ಗೂ | ಗೃ | ಗೄ |
| ಘ | ಘಾ | ಘಿ | ಘೀ | ಘು | ಘೂ | ಘೃ | ಘೄ |
| ಙ | ಙಾ | ಙಿ | ಙೀ | ಙು | ಙೂ | ಙೃ | ಙೄ |
| ಚ | ಚಾ | ಚಿ | ಚೀ | ಚು | ಚೂ | ಚೃ | ಚೄ |
| ಛ | ಛಾ | ಛಿ | ಛೀ | ಛು | ಛೂ | ಛೃ | ಛೄ |
| ಜ | ಜಾ | ಜಿ | ಜೀ | ಜು | ಜೂ | ಜೃ | ಜೄ |
| ಝ | ಝಾ | ಝಿ | ಝೀ | ಝು | ಝೂ | ಝೃ | ಝೄ |
| ಞ | ಞಾ | ಞಿ | ಞೀ | ಞು | ಞೂ | ಞೃ | ಞೄ |
| ಟ | ಟಾ | ಟಿ | ಟೀ | ಟು | ಟೂ | ಟೃ | ಟೄ |
| ಠ | ಠಾ | ಠಿ | ಠೀ | ಠು | ಠೂ | ಠೃ | ಠೄ |
| ಡ | ಡಾ | ಡಿ | ಡೀ | ಡು | ಡೂ | ಡೃ | ಡೄ |
| ಢ | ಢಾ | ಢಿ | ಢೀ | ಢು | ಢೂ | ಢೃ | ಢೄ |
| ಣ | ಣಾ | ಣಿ | ಣೀ | ಣು | ಣೂ | ಣೃ | ಣೄ |

| | | | | | | | |
|---|---|---|---|---|---|---|---|
| ಎ | ಏ | ಐ | ಒ | ಓ | ಔ | ಅಂ | ಅಃ |
| ೆ | ೇ | ೈ | ೊ | ೋ | ೌ | ಂ | ಃ |
| ಕೆ | ಕೇ | ಕೈ | ಕೊ | ಕೋ | ಕೌ | ಕಂ | ಕಃ |
| ಖೆ | ಖೇ | ಖೈ | ಖೊ | ಖೋ | ಖೌ | ಖಂ | ಖಃ |
| ಗೆ | ಗೇ | ಗೈ | ಗೊ | ಗೋ | ಗೌ | ಗಂ | ಗಃ |
| ಘೆ | ಘೇ | ಘೈ | ಘೊ | ಘೋ | ಘೌ | ಘಂ | ಘಃ |
| ಙೆ | ಙೇ | ಙೈ | ಙೊ | ಙೋ | ಙೌ | ಙಂ | ಙಃ |
| ಚೆ | ಚೇ | ಚೈ | ಚೊ | ಚೋ | ಚೌ | ಚಂ | ಚಃ |
| ಛೆ | ಛೇ | ಛೈ | ಛೊ | ಛೋ | ಛೌ | ಛಂ | ಛಃ |
| ಜೆ | ಜೇ | ಜೈ | ಜೊ | ಜೋ | ಜೌ | ಜಂ | ಜಃ |
| ಝೆ | ಝೇ | ಝೈ | ಝೊ | ಝೋ | ಝೌ | ಝಂ | ಝಃ |
| ಞೆ | ಞೇ | ಞೈ | ಞೊ | ಞೋ | ಞೌ | ಞಂ | ಞಃ |
| ಟೆ | ಟೇ | ಟೈ | ಟೊ | ಟೋ | ಟೌ | ಟಂ | ಟಃ |
| ಠೆ | ಠೇ | ಠೈ | ಠೊ | ಠೋ | ಠೌ | ಠಂ | ಠಃ |
| ಡೆ | ಡೇ | ಡೈ | ಡೊ | ಡೋ | ಡೌ | ಡಂ | ಡಃ |
| ಢೆ | ಢೇ | ಢೈ | ಢೊ | ಢೋ | ಢೌ | ಢಂ | ಢಃ |
| ಣೆ | ಣೇ | ಣೈ | ಣೊ | ಣೋ | ಣೌ | ಣಂ | ಣಃ |

| | | | | | | | |
|---|---|---|---|---|---|---|---|
| ತ | ತಾ | ತಿ | ತೀ | ತು | ತೂ | ತೃ | ತೄ |
| ಥ | ಥಾ | ಥಿ | ಥೀ | ಥು | ಥೂ | ಥೃ | ಥೄ |
| ದ | ದಾ | ದಿ | ದೀ | ದು | ದೂ | ದೃ | ದೄ |
| ಧ | ಧಾ | ಧಿ | ಧೀ | ಧು | ಧೂ | ಧೃ | ಧೄ |
| ನ | ನಾ | ನಿ | ನೀ | ನು | ನೂ | ನೃ | ನೄ |
| ಪ | ಪಾ | ಪಿ | ಪೀ | ಪು | ಪೂ | ಪೃ | ಪೄ |
| ಫ | ಫಾ | ಫಿ | ಫೀ | ಫು | ಫೂ | ಫೃ | ಫೄ |
| ಬ | ಬಾ | ಬಿ | ಬೀ | ಬು | ಬೂ | ಬೃ | ಬೄ |
| ಭ | ಭಾ | ಭಿ | ಭೀ | ಭು | ಭೂ | ಭೃ | ಭೄ |
| ಮ | ಮಾ | ಮಿ | ಮೀ | ಮು | ಮೂ | ಮೃ | ಮೄ |
| ಯ | ಯಾ | ಯಿ | ಯೀ | ಯು | ಯೂ | ಯೃ | ಯೄ |
| ರ | ರಾ | ರಿ | ರೀ | ರು | ರೂ | ರೃ | ರೄ |
| ಲ | ಲಾ | ಲಿ | ಲೀ | ಲು | ಲೂ | ಲೃ | ಲೄ |
| ವ | ವಾ | ವಿ | ವೀ | ವು | ವೂ | ವೃ | ವೄ |
| ಶ | ಶಾ | ಶಿ | ಶೀ | ಶು | ಶೂ | ಶೃ | ಶೄ |
| ಷ | ಷಾ | ಷಿ | ಷೀ | ಷು | ಷೂ | ಷೃ | ಷೄ |
| ಸ | ಸಾ | ಸಿ | ಸೀ | ಸು | ಸೂ | ಸೃ | ಸೄ |
| ಹ | ಹಾ | ಹಿ | ಹೀ | ಹು | ಹೂ | ಹೃ | ಹೄ |
| ಳ | ಳಾ | ಳಿ | ಳೀ | ಳು | ಳೂ | ಳೃ | ಳೄ |

| | | | | | | | |
|---|---|---|---|---|---|---|---|
| ತೆ | ತೇ | ತೈ | ತೊ | ತೋ | ತೌ | ತಂ | ತಃ |
| ಥೆ | ಥೇ | ಥೈ | ಥೊ | ಥೋ | ಥೌ | ಥಂ | ಥಃ |
| ದೆ | ದೇ | ದೈ | ದೊ | ದೋ | ದೌ | ದಂ | ದಃ |
| ಧೆ | ಧೇ | ಧೈ | ಧೊ | ಧೋ | ಧೌ | ಧಂ | ಧಃ |
| ನೆ | ನೇ | ನೈ | ನೊ | ನೋ | ನೌ | ನಂ | ನಃ |
| ಪೆ | ಪೇ | ಪೈ | ಪೊ | ಪೋ | ಪೌ | ಪಂ | ಪಃ |
| ಫೆ | ಫೇ | ಫೈ | ಫೊ | ಫೋ | ಫೌ | ಫಂ | ಫಃ |
| ಬೆ | ಬೇ | ಬೈ | ಬೊ | ಬೋ | ಬೌ | ಬಂ | ಬಃ |
| ಭೆ | ಭೇ | ಭೈ | ಭೊ | ಭೋ | ಭೌ | ಭಂ | ಭಃ |
| ಮೆ | ಮೇ | ಮೈ | ಮೊ | ಮೋ | ಮೌ | ಮಂ | ಮಃ |
| ಯೆ | ಯೇ | ಯೈ | ಯೊ | ಯೋ | ಯೌ | ಯಂ | ಯಃ |
| ರೆ | ರೇ | ರೈ | ರೊ | ರೋ | ರೌ | ರಂ | ರಃ |
| ಲೆ | ಲೇ | ಲೈ | ಲೊ | ಲೋ | ಲೌ | ಲಂ | ಲಃ |
| ವೆ | ವೇ | ವೈ | ವೊ | ವೋ | ವೌ | ವಂ | ವಃ |
| ಶೆ | ಶೇ | ಶೈ | ಶೊ | ಶೋ | ಶೌ | ಶಂ | ಶಃ |
| ಷೆ | ಷೇ | ಷೈ | ಷೊ | ಷೋ | ಷೌ | ಷಂ | ಷಃ |
| ಸೆ | ಸೇ | ಸೈ | ಸೊ | ಸೋ | ಸೌ | ಸಂ | ಸಃ |
| ಹೆ | ಹೇ | ಹೈ | ಹೊ | ಹೋ | ಹೌ | ಹಂ | ಹಃ |
| ಳೆ | ಳೇ | ಳೈ | ಳೊ | ಳೋ | ಳೌ | ಳಂ | ಳಃ |

## ೩೪ನೆಯ ಪಾಠ.

ನನಗೆ. ಅವನಿಗೆ. ಇದೆ. ಚೆಂಡೊ.

ನನಗೊ. ಅವನಿಗೊ. ಅದೊ. ದಾಂಡೊ.

ಯಾರಿಗೆ. ಹೊಸದೊ.

ಈ ಚೆಂಡು ಹೊಸ ಚೆಂಡು. ಇದು ಯಾರಿಗೆ? ನಿನಗೊ ನನಗೊ? ಈ ಹೊಸ ಚೆಂಡು ನಿನಗೊ ಅವನಿಗೊ? ಇದು ನನಗೆ, ಅದು ಅವನಿಗೆ. ಅವನ ಚೆಂಡು ಇದೊ ಅದೊ? ಈ ದಾಂಡು ಯಾರದು? ಆ ದಾಂಡೊ? ನಿನಗೆ ಈ ದಾಂಡು ಬೇಕೊ ಆ ದಾಂಡು ಬೇಕೊ? ನನಗೆ ಇದೂ ಬೇಡ, ಅದೂ ಬೇಡ. ಬೇರೆ ದಾಂಡು ಬೇಕು.

ಹಾರಕ. ಪಾತಕ. ಪಾಯಸ. ಸಾಧಕ.

ಆಯಾಸ. ಶಾರದೆ.

**ಹೇಳಿ ಬರೆಯಿಸಿ:—**

ಕಾವಡಿ. ಹಾವಳಿ. ಕಾವಲು. ಅಂಗಾಲು.

ಬಂಗಾರ. ಅಂಗಳ.



## ೩೫ನೆಯ ಪಾಠ.

| | | |
|---|---|---|
| ಆಯಿತು. | ಆಡೋಣ. | ಹೋಯಿತು. |
| ಆಯಿತೆ. | ಓಡೋಣ. | ಹೋಯಿತೆ. |
| ಆಯಿತೊ. | ಹೋಗೋಣ. | ಹೋಯಿತೊ. |
| ಆಡಲೊ. | ಓಡಲೊ. | ಹೋಗಲೊ. |

ನಿನಗೆ ಊಟ ಆಯಿತೆ? ನನಗೆ ಆಯಿತು, ನಿನಗೊ? ನನಗೂ ಆಯಿತು. ನಿನಗೂ ಆಯಿತೆ? ಆಡೋಣ, ಬಾ. ನಾನು ಆಡಲೊ ಓಡಲೊ? ನಾನು ಆಡಬೇಡವೆ? ಬಾ ಹೋಗೋಣ. ಅಗೋ ಗಿಣಿ! ಓಹೊ! ಗಿಣಿ ಹಾರಿ ಹೋಯಿತು. ಗಿಣಿ ಹೋಯಿತೆ?

ಮಹಾರಾಜ. ರಾಮಾಯಣ. ಸಾಲಗಾರ.
ಹೂವಾಡಿಗ. ಬಾಯಾರಿಕೆ. ನೆರೆಹೊರೆ.

**ಹೇಳಿ ಬರೆಯಿಸಿ:—**

ಚಿಲಕ. ಕುರುಡ. ಕುಂಬಾರ. ಮುದುಕ.
ಗುಡುಗು. ಅಂಬಾರಿ.



## ೩೬ನೆಯ ಪಾಠ.

ಆಡೋಣವೆ. ಆಡೋಣವೊ.

ಓದೋಣವೆ. ಓದೋಣವೊ.

ಹೋಗೋಣವೆ. ಹೋಗೋಣವೊ.

ನೋಡೋಣವೆ. ನೋಡೋಣವೊ.

ಕೆರೆಗೆ ಹೋಗೋಣವೊ ಮನೆಗೆ ಹೋಗೋಣವೊ? ಈಗ ಆಡೋಣವೊ ಓದೋಣವೊ? ಈಗ ಓದೋಣ, ಆಮೇಲೆ ಆಡೋಣ. ನೀನು ಓದಿ ಆಯಿತೆ? ನಾನು ಓದಿ ಆಯಿತು. ನಾನೂ ನೀನೂ ಆಡೋಣವೆ? ಅಗೋ, ಗಿಣಿ! ಹೋಗಿ ನೋಡೋಣವೆ? ಬಾ, ಹೋಗೋಣ.

ಏನೇನೊ. ಊರೊಳಗೆ. ಹೊಂಬಾಳೆ.

ಹಾಗೇನೊ. ಕಾಲುಂಗುರ. ಗಂಗಾಧರ.

**ಹೇಳಿ ಬರೆಯಿಸಿ:—**

ಅಂಗಡಿ. ಗಾವುದ. ತಂಗಳು. ತೊಗರಿ.

ಬಾಗಿಲು. ಭೋಜನ.



## ೩೭ನೆಯ ಪಾಠ.

ಆಡುತೇನೆ. ಓದುತೇನೆ. ಓದಿದೆನು.

ಆಡುತಾನೆ. ಓದುತಾನೆ. ಓದಿದನು.

ಆಡುತಾಳೆ. ಓದುತಾಳೆ. ಓದಿದಳು.

ಓದಿದೆವು. ಓದಿದರು. ಓದಿದೆಯೊ.

ಶಾಮ, ನೀನು ಓದಿದೆಯೊ? ನಾನು ಓದಿದೆನು, ನೀನೊ? ನಾನು ಓದುತೇನೆ. ರಾಮ ಆಡುತಾನೆ. ಸೀತೆಯೂ ಆಡುತಾಳೆ. ರಾಮ ಓದಿದನು. ಜಾನಕಿ ಓದಿದಳು. ನಾನು, ರಾಮ, ಜಾನಕಿ ಓದಿದೆವು. ಯಾರು ಓದಿದರು, ಯಾರು ಆಡಿದರು?

ಮರದೇಣಿ. ಅಂತರಂಗ. ಸಿಂಹಾಸನ.

ಸಂಪಾದನೆ. ಹಿಂದಿರುಗು. ಸಮಾಧಾನ.

**ಹೇಳಿ ಬರೆಯಿಸಿ:—**

ಬಲವಂತ. ಯಜಮಾನ. ಭೀಮಸೇನ. ಹಿರಿಯರು.

ಸಹವಾಸ. ಸಮಾಚಾರ.

## ೩೮ನೆಯ ಪಾಠ.

ಕ ೖ ಗ ∩

ಕ್ಕ ಸ್ಕ ಗ್ಗ ಲ್ಗ

ಅಕ್ಕ. ಅಕ್ಕಿ. ಬೆಕ್ಕು. ಬೆಕ್ಕೆ? ಬೆಕ್ಕೊ?

ಚಿಕ್ಕ. ರಕ್ಕೆ. ಮೊಗ್ಗು. ತಗ್ಗು. ಹೆಗ್ಗಣ.

ಹಕ್ಕಿ. ಹುಗ್ಗಿ. ನುಗ್ಗಿತು.

ಅಕ್ಕ, ಬೆಕ್ಕು ಬಂತು, ಬೆಕ್ಕು. ಇದು ಹಕ್ಕಿ. ಹಕ್ಕಿಗೆ ಎರಡು ರಕ್ಕೆ. ಅದು ಚಿಕ್ಕ ಹಕ್ಕಿ. ಹುಗ್ಗಿ ಆಯಿತೆ? ನನಗೆ ಕೊಂಚ ಹುಗ್ಗಿ. ಹೆಗ್ಗಣ ಒಳಗೆ ನುಗ್ಗಿತು. ಮೊಗ್ಗು ಬೇಕೇ, ಮೊಗ್ಗು. ಈಗ ಮೊಗ್ಗು ತಗ್ಗು.

ಭಾಸ್ಕರ. ನಮಸ್ಕಾರ. ಮೇಲ್ಗಡೆ.

**ಹೇಳಿ ಬರೆಯಿಸಿ:—**

ಅಕ್ಕ. ಚೆಕ್ಕೆ. ಹಗ್ಗ. ಉಕ್ಕು. ಅಗ್ಗ. ಸುಗ್ಗಿ.

ಖ ಖ ಘ ಘ



## ೩೯ನೆಯ ಪಾಠ.

| | | |
|---|---|---|
| ಚ ಚ | ಜ ಜ | ಞ ಞ |
| ಚ್ಚ | ಜ್ಜ | ಜ್ಞ |
| ಹುಚ್ಚ. | ಹುಚ್ಚಿ. | ಹುಚ್ಚು. |
| ಹುಚ್ಚೊ. | ಕುಚ್ಚು. | ಅಜ್ಜಿ. |
| ಬಜ್ಜಿ. | ಗೆಜ್ಜೆ. | ಹಜ್ಜೆ. |

ಅವನು ಹುಚ್ಚ. ಹೂವಿನ ಕುಚ್ಚು. ಅಜ್ಜಿ, ನನಗೆ ಬಜ್ಜಿ. ಇದು ಕುರಿಯ ಹಜ್ಜೆ. ಅದು ಗಿಣಿಯ ಗೆಜ್ಜೆ. ಇದು ಹೆಚ್ಚೊ ಅದು ಹೆಚ್ಚೊ? ಬಾಯಿ ಮುಚ್ಚು.

**ಹೇಳಿ ಬರೆಯಿಸಿ:—**

ಹಚ್ಚಡ. ಮಜ್ಜಿಗೆ. ಗೋಜು. ಎಚ್ಚರ.

ಸಜ್ಜಿಗೆ. ಗೊಜ್ಜು.

ಛ ಛ ಝ ಝ



## ೪೦ನೆಯ ಪಾಠ.

ಟ ಟ ಡ ಡ ಣ ಣ

ಟ್ಟ ಡ್ಡ ಣ್ಣ

ಬೆಟ್ಟ. ರೊಟ್ಟಿ. ಹಿಟ್ಟು. ತಟ್ಟೆ. ಹಿಟ್ಟೋ?

ಪುಟ್ಟದು. ಅಷ್ಟು. ಒಡ್ಡ. ದೊಡ್ಡದು. ಹಣ್ಣು.

ಇಷ್ಟು. ಎಷ್ಟು. ದಡ್ಡ. ಸಣ್ಣದು. ಕಣ್ಣು.

ಇದು ಪುಟ್ಟ ಚೆಂಡು. ಅದು ದೊಡ್ಡ ಚೆಂಡು. ಆ ಹಣ್ಣು ಸಣ್ಣದು. ಆ ಸಣ್ಣ ಹಣ್ಣು ನನಗೆ. ನಿನಗೆ ಎಷ್ಟುಬೇಕು ? ಇಷ್ಟೊ ಅಷ್ಟೊ? ಬೆಕ್ಕಿಗೆ ಎಷ್ಟು ಕಣ್ಣು ? ಎರಡು ಕಣ್ಣು. ರೊಟ್ಟಿಗೆ ಬೆಣ್ಣೆ. ಅವನು ಒಡ್ಡ. ಇವನು ದಡ್ಡ.

ಕಷ್ಟ. ಚೇಷ್ಟೆ. ಉಷ್ಣ. ಕೃಷ್ಣ. ಕಣ್ಣೀರು.

**ಹೇಳಿ ಬರೆಯಿಸಿ:—**

ಹೊಟ್ಟೆ. ಗೂಡೆ. ದಂಡ. ಬೆಣೆ. ಬಟ್ಟೆ.

ಗುಡ್ಡೆ. ದಡ್ಡ. ಬೆಣ್ಣೆ.

ಠ ಠ ಢ ಢ

## ೪೧ನೆಯ ಪಾಠ.

ತ ್ತ ದ ್ದ ನ ್ನ

ತ್ತ ದ್ದ ನ್ನ

ಅತ್ತ. ಕತ್ತಿ. ಕತ್ತು. ಕತ್ತೆ. ಕತ್ತೊ?

ಬತ್ತ. ತುತ್ತು. ಮುತ್ತು. ಸದ್ದು. ಮುದ್ದು.

ಗದ್ದೆ. ನನ್ನ. ಚಿನ್ನ. ಅನ್ನ. ತಿನ್ನು.

ಅದು ಬತ್ತದ ಗದ್ದೆ. ಆ ಕತ್ತೆ ಕುಂಟ ಕತ್ತೆ. ಇದು ಮುದ್ದು ಮಗು. ಮಗು, ಮುತ್ತು ಕೊಡು, ಮುತ್ತು. ಅದು ಏನು ಸದ್ದು? ಅದು ಹದ್ದು. ಈ ಬಳೆ ನನ್ನ ಬಳೆ. ಇದು ಚಿನ್ನದ ಬಳೆ. ರಾಮ, ಅನ್ನಾ ತಿನ್ನು. ಅಕ್ಕ, ತುತ್ತು ಹಾಕು.

ರಕ್ತ. ಯುಕ್ತಿ. ಶಕ್ತ. ಭಕ್ತಿ. ಯತ್ನ.

ಸ್ನಾನ. ನಿಶ್ಚಯ. ಪಶ್ಚಿಮ. ಜ್ಞಾನ. ಜ್ಞಾಪಕ.

**ಹೇಳಿ ಬರೆಯಿಸಿ:—**

ಕೋತಿ. ಕಂದ. ಬೆನ್ನು. ಕೊತ್ತಿ. ಕದ್ದ. ಕೆನ್ನೆ.

ಥ ್ಥ ಧ ್ಧ



## ೪೨ನೆಯ ಪಾಠ.

ಪ ್ಪ ಬ ್ಬ ಮ ್ಮ

ಪ್ಪ ಬ್ಬ ಮ್ಮ

ಅಪ್ಪ. ತಪ್ಪು. ಕಪ್ಪು. ಕಪ್ಪೆ. ಕಪ್ಪೊ?

ತುಪ್ಪ. ಉಪ್ಪು. ಸಪ್ಪೆ. ಕಬ್ಬು. ಹಬ್ಬ.

ಅಮ್ಮ. ತಮ್ಮ. ಕಮ್ಮಾರ. ರುಕ್ಮಿಣಿ. ತಿಮ್ಮಿ

ಅಣ್ಣಾ, ಅಪ್ಪ ಬಂದನೆ? ಕಬ್ಬು ತಂದನೆ? ಈ ಕಬ್ಬು ಸಪ್ಪೆ. ನಾಳೆ ಹಬ್ಬ. ಅಮ್ಮಾ, ಅನ್ನಾ ಹಾಕು. ಉಪ್ಪು ಸಾಕು. ತುಪ್ಪಾ ಬೇಕು. ಇವನು ನನ್ನ ತಮ್ಮ. ರುಕ್ಮಿಣಿ, ಆಡೋಣ ಬಾ.

ಹಪ್ಪಳ. ಪುಷ್ಪ. ಸ್ಮರಣೆ. ತಪ್ಪಲೆ. ಸ್ಪಷ್ಟ. ಭಸ್ಮ.

**ಹೇಳಿ ಬರೆಯಿಸಿ:—**

ತಂಪು. ಒಬ್ಬ. ನಮ್ಮಣ್ಣ. ತಪ್ಪು. ಕೊಬ್ಬು. ತಮ್ಮಣ್ಣ.

ಫ ್ಫ ಭ ್ಭ



## ೩೩ನೆಯ ಪಾಠ.

# ಯ ್ಯ ರ ್ರ

# ಯ್ಯ ರ್ರ

ಅಯ್ಯ. ಪಲ್ಯ. ಮನುಷ್ಯ. ರಾತ್ರಿ. ಸತ್ರ.

ಸತ್ಯ. ವ್ಯಾಜ್ಯ. ಜಾತ್ರೆ. ಚಂದ್ರ. ವಸ್ತ್ರ.

ಈ ಮನುಷ್ಯ ಯಾರು? ಅಯ್ಯಾ, ಕಾಯಿಪಲ್ಯ ತಂದೆಯಾ? ವ್ಯಾಜ್ಯ ಆಡಬೇಡ. ಈ ಹೊತ್ತು ಜಾತ್ರೆ. ರಾತ್ರಿ ಆಯಿತು. ಅಗೋ, ಚಂದ್ರ. ಅದು ಸತ್ರ. ಇದು ನನ್ನ ವಸ್ತ್ರ. ಅವನ ಮಾತು ಸತ್ಯ.

ಧಾನ್ಯ. ತ್ರಾಣ. ಸೌಖ್ಯ.

ಮಧ್ಯ. ಪ್ರೀತಿ. ಶ್ರಮ.

**ಹೇಳಿ ಬರೆಯಿಸಿ:—**

ಪದ್ಯ. ನಾಣ್ಯ. ಭದ್ರ. ವಿದ್ಯೆ. ಜಾಡ್ಯ. ಮುದ್ರೆ.



## ೩೩ನೆಯ ಪಾಠ.

ರ ೯ ಲ ್ಲ

ರ್ಕ (ರ್ಕ) ಲ್ಲ

ಅರ್ಥ. ಖರ್ಜೂರ. ಇಲ್ಲಿ. ನಿಲ್ಲು.

ಮೂರ್ತಿ. ಕರ್ಪೂರ. ಅಲ್ಲಿ. ಹುಲ್ಲು.

ಸೂರ್ಯ. ಪಾರ್ವತಿ. ಎಲ್ಲಿ. ಅಲ್ಲೇ.

ಇದು ಖರ್ಜೂರ. ನಿನಗೆ ಅರ್ಧ, ನನಗೆ ಅರ್ಧ. ಕರ್ಪೂರ ಹತ್ತಿಸು. ಅವನ ಹೆಸರು ಮೂರ್ತಿ. ಇವಳ ಹೆಸರು ಪಾರ್ವತಿ. ಅಲ್ಲಿ ನೋಡು, ಸೂರ್ಯ. ಮೂರ್ತಿ ಇಲ್ಲಿ ಇಲ್ಲ; ಎಲ್ಲಿ ಹೋದ? ಹಸುವಿಗೆ ಹುಲ್ಲು ಹಾಕು. ನೀನು ಅಲ್ಲೇ ನಿಲ್ಲು.

ಪರ್ವತ. ಧೈರ್ಯ. ಶ್ಲೇಷ್ಮ.

ಆಶ್ಚರ್ಯ. ತೀರ್ಥ. ಪ್ರಹ್ಲಾದ.

**ಹೇಳಿ ಬರೆಯಿಸಿ:—**

ದುರ್ಗ. ಕಾಲು. ಸಾಲು. ಮಾರ್ಗ. ಕಲ್ಲು. ಸಲ್ಲು.



## ೪೫ನೆಯ ಪಾಠ.

# ವ ್ವ ಶ ್ಶ ಷ ್ಷ

# ವ್ವ ಶ್ಯ ಕ್ಷ

ಅವ್ವ. ಧ್ವನಿ. ಅಕ್ಷರ. ಪಕ್ಷಿ.

ಬುವ್ವ. ಸ್ವಲ್ಪ. ಈ ಕ್ಷಣ. ಕ್ಷೇಮ.

ಅವಳು ನಮ್ಮ ಅವ್ವ. ಇವಳು ನಿಮ್ಮ ಅವ್ವ. ಅವ್ವ, ಅದು ಏನು? ನನಗೆ ಸ್ವಲ್ಪ. ಅದು ಯಾರ ಧ್ವನಿ? ಮಗು, ಬುವ್ವ ತಿಂದೆಯಾ? ಅಲ್ಲಿ ನೋಡು ಪಕ್ಷಿ. ಈ ಅಕ್ಷರ ಚೆನ್ನಾಗಿದೆ. ಈ ಕ್ಷಣ ಮನೆಗೆ ಹೋಗು. ನಾನು ಕ್ಷೇಮ, ನೀನು ಕ್ಷೇಮವೆ?

ಸ್ವಾಮಿ. ಸ್ವಪ್ನ. ನಿಶ್ಶೇಷ. ನಿಶ್ಶಬ್ದ.

**ಹೇಳಿ ಬರೆಯಿಸಿ:—**

ತೊವ್ವೆ. ಸ್ವರ. ಶ್ವಾಸ. ಪಕ್ಷ. ಶಿಕ್ಷೆ. ಲಕ್ಷಣ.



## ೪೬ನೆಯ ಪಾಠ.

ಸ ್ಸ ಹ ್ಹ ಳ ್ಳ

ಸ್ಸ ಹ್ಹ ಳ್ಳ

ಮನಸ್ಸು. ಹಳ್ಳ. ಹಳ್ಳಿ.

ಉತ್ಸವ. ಕಳ್ಳ. ಮುಳ್ಳು.

ನಿನಗೆ ಆಟದ ಮೇಲೆ ಮನಸ್ಸು ಇಲ್ಲವೋ? ಈ ಹೊತ್ತು ದೇವರ ಉತ್ಸವ. ಅದು ಹಳ್ಳ, ಬಿದ್ದೀಯೆ? ಇದು ಹಳ್ಳಿ. ಈ ಹಳ್ಳಿಯಲ್ಲಿ ಅಂಗಡಿ ಇಲ್ಲ. ಹಾ! ಕಾಲಿಗೆ ಮುಳ್ಳು ಚುಚ್ಚಿತು. ಅವನು ಕಳ್ಳ.

ಮತ್ಸರ. ಸಂವತ್ಸರ. ಕಲ್ಹಾರ.

**ಹೇಳಿ ಬರೆಯಿಸಿ:—**

ವಯಸ್ಸು. ಕುಳ್ಳ. ಏಳು. ನಿಸ್ಸೀಮ. ಸುಳ್ಳು. ಎಳ್ಳು

**ಕ್ ಖ್ ಗ್ ಘ್ ಜ್ ನ್(ೞ)**

**ಅಕ್ ಆನ್ ಆೞ**

**ಕಯ್. ಕಾಲ್. ಕಣ್. ಬೆೞ.**



## ೪೭ನೆಯ ಪಾಠ.



# ಕುದುರೆ.

ಕುದುರೆ ಕೆನೆಯುವುದು. ಕತ್ತೆ ಕಿರುಚುವುದು. ಕುರಿ ಅರಚುವುದು. ಗೂಳಿ ಗುಟುರು ಹಾಕುವುದು. ನಾಯಿ ಬಗುಳುವುದು. ಬೆಕ್ಕು ಮಿಯಾವ್ ಎನ್ನುವುದು. ಹುಲಿ ಆರ್ಭಟಿಸುವುದು. ಸಿಂಹವು ಗರ್ಜಿಸುವುದು. ಕಾಗೆಯೂ ಕೋಳಿಯೂ ಕೂಗುವುವು. ಪಾರಿವಾಳವು ಗುಬ್ಬಳಿಸುವುದು. ನವಿಲು ಕೇಕೇ ಹಾಕುವುದು. ತುಂಬಿಯೂ ಜೇನು ಹುಳುವೂ ಮೊರೆಯುವುವು. ಹಾವು ಬುಸುಗುಟ್ಟುವುದು. ಮನುಷ್ಯರು ಮಾತನಾಡುವರು.

ನಮ್ಮವರು. ಅಪ್ಪಪ್ಪ. ಅಮ್ಮಮ್ಮ. ಅಲ್ಲಲ್ಲಿ.

**ಹೇಳಿ ಬರೆಯಿಸಿ:—**

ಆಯಾಸ. ಪಾಯಸ. ಮುಂಗಾಲು. ಬೈತಲೆ.

ಮೃದು. ಅಮೃತ.

## ೪೮ನೆಯ ಪಾಠ.



# ಬೆಳಗಾಯಿತು.

ಕೋಳಿ ಕೂಗಿತು. ಬೆಳಗಾಗುತ ಬಂತು. ಅಗೋ, ಪಕ್ಷಿಗಳು ಕೂಗುತ್ತಾ ಇವೆ. ತಣ್ಣಗೆ ಗಾಳಿ ಬೀಸುತ್ತಾ ಇದೆ. ಆಗಲೇ ಬೀದಿಯಲ್ಲಿ ಜನಗಳು ತಿರುಗಾಡುತ್ತಾ ಇದ್ದಾರೆ. ಈಗ ಆಕಾಶದಲ್ಲಿ ನಕ್ಷತ್ರಗಳು ಇಲ್ಲ. ಅಲ್ಲಿ ನೋಡು, ಸೂರ್ಯ ಹುಟ್ಟಿದನು. ಕತ್ತಲೆ ಹೋಯಿತು. ಬೆಳಕು ಬಂತು. ಎಲ್ಲೆಲ್ಲಿಯೂ ಎಳೆಬಿಸಿಲು. ಇನ್ನು ಮಲಗಿರಬಾರದು. ಮಠಕ್ಕೆ ಹೊತ್ತು ಆಯಿತು.

ಸರ್ಪ. ದರಿದ್ರ. ವಸ್ತು.

ಶತ್ರು. ಬಾಲ್ಯ. ಮುಖ್ಯ.

**ಹೇಳಿ ಬರೆಯಿಸಿ:—**

ಓಡಾಡು. ಗುಡುಗಾಟ. ಅತ್ತತ್ತ. ಯಾವಾಗ.

ಹೋಗೋಣ. ಇತ್ತಿತ್ತ.



## ೪೯ನೆಯ ಪಾಠ.

# ಮಠ.

ಮಗು, ಮಠಕ್ಕೆ ಹೋಗುವುದಿಲ್ಲವೆ? ಬಿಸಿಲು ಹುಟ್ಟಿತು. ಹುಡುಗರು ಮಠಕ್ಕೆ ಹೋಗುತ್ತಾ ಇದ್ದಾರೆ. ಇನ್ನೂ ನೀನು ಹಾಸಿಗೆಯಿಂದ ಏಳಲಿಲ್ಲ. ಏಳು, ಹೊತ್ತು ಆಯಿತು. ಮುಖವನ್ನು ತೊಳೆದುಕೊ. ಮಾಸಿದ ಬಟ್ಟೆಯನ್ನು ತೆಗೆದು ಹಾಕು. ಚೊಕ್ಕಟವಾದ ಬಟ್ಟೆಗಳನ್ನು ಹಾಕಿಕೊ. ಪುಸ್ತಕಗಳನ್ನು ತೆಗೆದುಕೊ. ಅಪ್ಪನಿಗೆ ನಮಸ್ಕಾರ ಮಾಡು, ಮಠಕ್ಕೆ ಹೋಗು. ಉಪಾಧ್ಯಾಯರಿಗೆ ನಮಸ್ಕಾರ ಮಾಡು. ಕಲಿತ ಪಾಠವನ್ನು ಒಪ್ಪಿಸು. ಹೊಸ ಪಾಠವನ್ನು ಹೇಳಿಸಿಕೊ. ಉಪಾಧ್ಯಾಯರು ಹೇಳಿದಂತೆ ಕೇಳು.

ಜನ್ಮ. ಸೂಕ್ಷ್ಮ. ಜೀರ್ಣ. ಚಕ್ರ. ಹಾಸ್ಯ. ಅಗತ್ಯ.

**ಹೇಳಿ ಬರೆಯಿಸಿ:—**

ಊರೊಳಗೆ. ಕಾಲಂದುಗೆ. ಆಗಾಗಲೆ. ಮುಂಗೈ.

ಚಿಕ್ಕಕ್ಕ. ಚಿಕ್ಕಣ್ಣ.

---

## ೫೦ನೆಯ ಪಾಠ.

# ಸಂಜೆ.

ಇನ್ನು ಸಂಜೆ ಆಯಿತು. ಅಲ್ಲಿ ನೋಡು, ಸೂರ್ಯನು ಕೆಂಡದ ಹಾಗೆ ಕೆಂಪಗೆ ಇದ್ದಾನೆ. ಈಗ ಸೂರ್ಯನು ಮುಳುಗುವ ಸಮಯ. ಹುಡುಗರು ಮಠದಿಂದ ಹೊರಟರು. ಅವರು ಗುಂಪುಗುಂಪಾಗಿ

ಮನೆಗೆ ಹೋಗುತ್ತಾ ಇದ್ದಾರೆ. ದನಕರುಗಳೂ ಮನೆಗೆ ಹೋಗುತ್ತಾ ಇವೆ. ಈಗ ಸೂರ್ಯನು ಕಾಣಿಸುವುದೇ ಇಲ್ಲ. ಪಕ್ಷಿಗಳು ತಮ್ಮ ತಮ್ಮ ಗೂಡಿಗೆ ಹೋಗುತ್ತಾ ಇವೆ. ಕತ್ತಲೆ ಆಯಿತು. ಅಲ್ಲಿ ನೋಡು, ಒಂದು ನಕ್ಷತ್ರ. ಇಲ್ಲಿ ನೋಡು, ಇನ್ನೊಂದು. ಎಲ್ಲಿ ನೋಡಿದರೆ ಅಲ್ಲಿ ನಕ್ಷತ್ರ. ಅಗೋ ಚಂದ್ರ. ಇನ್ನು ಬೆಳದಿಂಗಳು ಬರುತ್ತದೆ.

ಸ್ನೇಹ. ಪ್ರಶ್ನೆ. ಕಾರ್ಯ. ಮೂರ್ಖ.

**ಹೇಳಿ ಬರೆಯಿಸಿ:—**

ಎರಡೆರಡು. ತಿಂದನ್ನ. ಚಿಕ್ಕಪ್ಪ. ಮೊಣಕಾಲು.
ತಣ್ಣೀರು. ಚಿಕ್ಕಮ್ಮ.

---

## ೫೧ನೆಯ ಪಾಠ.

ಕವಾಡಿಗನು ಹಾಲನ್ನೂ ಮೊಸರನ್ನೂ ಮಾರುವನು.
ಅಗಸನು ಬಟ್ಟೆಗಳನ್ನು ಒಗೆಯುವನು.
ಚಿಪ್ಪಿಗನು ಬಟ್ಟೆಗಳನ್ನು ಹೊಲಿಯುವನು.
ಅಕ್ಕಸಾಲೆ ಒಡವೆಗಳನ್ನು ಮಾಡುವನು.
ಕುಂಬಾರನು ಕುಡಿಕೆ ಮಡಿಕೆಗಳನ್ನು ಮಾಡುವನು.
ಹೂವಾಡಿಗನು ಹೂವನ್ನು ಕಟ್ಟಿ ಮಾರುವನು.
ಬಡಗಿಯು ಮರದ ಕೆಲಸವನ್ನು ಮಾಡುವನು.
ಚಿತ್ರಗಾರನು ಚಿತ್ರವನ್ನು ಬರೆಯುವನು.
ವೈದ್ಯನು ರೋಗವನ್ನು ವಾಸಿಮಾಡುವನು.
ಉಪಾಧ್ಯಾಯರು ಓದುಬರಹವನ್ನು ಕಲಿಸುವರು.

ದೊಡ್ಡಪ್ಪ. ದೊಡ್ಡಮ್ಮ. ವಿಘ್ನ. ವ್ಯರ್ಥ.

**ಹೇಳಿ ಬರೆಯಿಸಿ:—**

ಕಾಲುಂಗರ. ಸಮಾಚಾರ. ಕೀರ್ತಿ. ದರ್ಶನ. ಹದಿನೈದು. ಸಂತೋಷ.

## ೫೨ನೆಯ ಪಾಠ.

# ಗಿಣಿ.



ಇದು ಗಿಣಿ. ಈ ಗಿಣಿ ಎಷ್ಟು ಮುದ್ದಾಗಿದೆ. ಇದಕ್ಕೆ ರೆಕ್ಕೆಗಳಿವೆ. ಇದು ಹಾರಬಲ್ಲುದು. ಕಾಗೆಯೂ ಹಾರಬಲ್ಲದು. ಕಾಗೆ ಚೆನ್ನೋ ಗಿಣಿ ಚೆನ್ನೋ? ಗಿಣಿಯೇ ಚೆನ್ನ. ಕಾಗೆ ಕಪ್ಪು. ಗಿಣಿ ಹಸುರು. ಇದರ ಕೊಕ್ಕು ನೋಡು, ಎಷ್ಟು ಕೆಂಪು. ಇದು ಸಾಕಿದ ಗಿಣಿ. ಇದಕ್ಕೆ ಮಾತು ಬರುವುದು. ರಾಮ, ರಾಮ, ಎನ್ನುತ್ತದೆ. ಬೆಕ್ಕು ಬಂತು ಬೆಕ್ಕು ಎನ್ನುತ್ತದೆ. ಗಿಣಿಯು ಬೆಕ್ಕಿಗೆ ಅಂಜುವುದು. ಇದು ನನ್ನ ಗಿಣಿ. ಇದಕ್ಕೆ ನಾನು ಹಾಲೂ ಅನ್ನ ಹಾಕುತ್ತೇನೆ, ಬಾಳೆಯ ಹಣ್ಣು ತಂದು ಕೊಡುತ್ತೇನೆ. ಇದಕ್ಕೆ ಮಾವಿನ ಹಣ್ಣೂ ಇಷ್ಟ. ಕಡಲೆಕಾಯಿ ಹಾಕಿದರೂ ತಿನ್ನುವುದು.

ಶ್ರೇಷ್ಠ. ಯಥಾರ್ಥ. ಅಷ್ಟಿಷ್ಟು. ತಿಂದಷ್ಟು.

**ಹೇಳಿ ಬರೆಯಿಸಿ:—**

ಕಡೆಗೋಲು. ಇನ್ನಷ್ಟು. ಇಪ್ಪತ್ತು. ಕಣ್ಣೀರು. ಬುದ್ಧಿ. ಸಿದ್ಧ.

## ಬಾಯಿಪಾಟ—ಹಾಡು.

ರಾಗ—ಪುನ್ನಾಗವರಾಳಿ. ಅಟತಾಳ ಚಾಪು.

ಗಿಣಿಯು ಪಂಜರದೊಳಿಲ್ಲ |
ಹರಿಹರಿಯೆ ಬರಿ ಪಂಜರವಾಯಿತಲ್ಲಾ || ಪಲ್ಲ ||

ಅಕ್ಕ ನಿನ್ನ ಮಾತ ಕೇಳಿ |
ಚಿಕ್ಕದೊಂದು ಗಿಣಿಯ ಸಾಕೆ |
ರೆಕ್ಕೆ ಬಂದಾ ರಾಮರಾಮನ |
ಬೆಕ್ಕು ಕೊಂಡುಹೋಯಿತಲ್ಲ || ೧ ||

ಅಂಗೈಯಲಾಡುವ ಗಿಣಿ |
ಮುಂಗೈಯಲೋದುವ ಗಿಣಿ |
ಕಂಗಳಿಗೆ[೧] ಕಾಣದಂತೆ |
ಮಂಗಮಾಯವಾಯಿತಲ್ಲ[೨] || ೨ ||

೧. ಕಂಗಳಿಗೆ = ಕಣ್ಣುಗಳಿಗೆ. ೨. ಮಂಗಮಾಯವಾಯಿತು = ಕಾಣದೆ ಹೋಯಿತು.

---

## ೫೩ನೆಯ ಪಾಠ.

# ಕೈ ತುತ್ತು.

ಅಮ್ಮಾ, ನನಗೆ ಹಸಿವು.

ಅನ್ನ ಹಾಕುತ್ತೇನೆ, ಬಾ.

ಅಲ್ಲಿ ನೋಡು, ಬೆಳದಿಂಗಳು. ಕೈತುತ್ತು ಹಾಕುತ್ತೀಯಾ, ಅಮ್ಮಾ.

ಹಾಕುತ್ತೇನೆ. ಎಲ್ಲರನ್ನೂ ಕರೆ.

ಅಣ್ಣಾ, ಅಮ್ಮ ಕೈತುತ್ತು ಹಾಕುತ್ತಾಳೆ, ಬಾ. ಸೀತೆ, ನೀನೂ ಬಾ.

ಶಾಮ, ರಂಗ, ನೀವೂ ಬನ್ನಿ.

ಎಲ್ಲರೂ ಕೈಕಾಲು ತೊಳೆದುಕೊಳ್ಳಿ.

ಅಂಗಳದಲ್ಲಿ ಕೂತುಕೊಳ್ಳಿ.

ಅಮ್ಮ ಅನ್ನಾ ತಂದಳು.

ಅಮ್ಮಾ, ನನಗೆ ಮೊದಲು.

ನನಗೆ ಮೊದಲು.

ಸದ್ದು ಮಾಡದೆ ಸುಮ್ಮನೆ ಕೂತುಕೊಳ್ಳಿ.

ಇಗೋ ನನಗೇ ಮೊದಲು.

ಒಬ್ಬೊಬ್ಬರಿಗೆ ಒಂದೊಂದು ತುತ್ತು ಬಂತು.

ಒಂದು ಸುತ್ತು ಆಯಿತು. ಎರಡು ಸುತ್ತು ಆಯಿತು.

ಮೂರು ಸುತ್ತು. ನಾಲ್ಕು ಸುತ್ತು.

ಹೊಟ್ಟೆ ತುಂಬಿತು, ಇನ್ನು ಸಾಕು.

ನಿರ್ಭಾಗ್ಯ. ಮರ್ಯಾದೆ. ಸಾಮರ್ಥ್ಯ.

**ಹೇಳಿ ಬರೆಯಿಸಿ:—**

ಕೆನೆಹಾಲು. ಹನುಮಂತ. ಹೆತ್ತಪ್ಪ. ಹೆತ್ತಮ್ಮ.

ಇದ್ದವನು. ಸಿಕ್ಕದವನು.



## ೫೪ನೆಯ ಪಾಠ.

# ಕೆಟ್ಟ ಹುಡುಗ.

ಹುಡುಗ— ಅಮ್ಮಾ, ನಾನು ಕೆಟ್ಟ ಹುಡುಗನಂತೆ, ನೋಡಮ್ಮಾ.

ತಾಯಿ— ಹಾಗೆ ಯಾರೆಂದರು, ಮಗು?

ಹುಡುಗ— ಅಪ್ಪ.

ತಾಯಿ— ಹಾಗೆ ಯಾಕೆಂದರು ಕಾಣೆಯಾ?

ಹುಡುಗ— ನಾನು ಕಾಣೆ.

ತಾಯಿ— ನಾನು ಹೇಳುತ್ತೇನೆ, ಕೇಳು. ನೀನು ಹೇಳಿದ ಮಾತು ಕೇಳುವುದಿಲ್ಲ, ಓದುವುದಿಲ್ಲ, ಬರೆಯುವುದಿಲ್ಲ, ಹೊತ್ತುಹೊತ್ತಿಗೆ ಮಠಕ್ಕೆ ಹೋಗುವುದಿಲ್ಲ, ಹೊತ್ತುಹೊತ್ತಿಗೆ ಊಟಕ್ಕೆ ಬರುವುದಿಲ್ಲ. ಸಿಕ್ಕದ ಕಡೆ ಅಲೆಯುತ್ತೀಯೆ. ಅಣ್ಣನನ್ನು ಬೈಯುತ್ತೀಯೆ. ತಮ್ಮನನ್ನು ಹೊಡೆಯುತ್ತೀಯೆ. ಸಿಕ್ಕಿದವರ ಸಂಗಡ ಜಗಳವಾಡುತ್ತೀಯೆ. ಅದಕ್ಕೇ ನಿನ್ನನ್ನು ಕೆಟ್ಟ ಹುಡುಗ, ಕೆಟ್ಟ ಹುಡುಗ ಎನ್ನುತ್ತಾರೆ. ನೀನು ಸರಿಯಾಗಿರು. ಯಾರೂ ಏನೂ ಅನ್ನುವುದಿಲ್ಲ.

ಬುದ್ಧಿವಂತ. ಭಾಗ್ಯವಂತ. ಅಶ್ವತ್ಥ. ಐಶ್ವರ್ಯ.

**ಹೇಳಿ ಬರೆಯಿಸಿ:—**

ಮತ್ತಷ್ಟು. ಅಪ್ಪಾಲೆ. ಸುವ್ವಾಲೆ. ಇಚ್ಛೆ. ಸ್ಥಳ. ಹನ್ನೆರಡು.

## ೫೫ನೆಯ ಪಾಠ.



## ನಾಯಿ.

ಇದು ನನ್ನ ನಾಯಿ. ಅದನ್ನು ನಾನು ಸಾಕುತ್ತೇನೆ. ನಾನು ಕೂಗಿದರೆ, ಅದು ಓಡಿಬರುವುದು. ನನ್ನನ್ನು ಕಂಡರೆ, ಅದು ಬಾಲವನ್ನು ಅಲ್ಲಾಡಿಸುವುದು. ನಾನು ಎಲ್ಲಿ ಹೋದರೆ ಅಲ್ಲಿ ಬರುವುದು. ಕಳ್ಳರು ನಾಯಿಗೆ ಅಂಜಿಕೊಳ್ಳುತ್ತಾರೆ. ಹೊಸಬರನ್ನು ಕಂಡರೆ, ನಾಯಿ ಬಗುಳುವುದು. ರಾತ್ರಿಯಲ್ಲಿ ಮನೆಯನ್ನು ಕಾಯುವುದು; ಹೊಲವನ್ನು ಕಾಯುವುದು; ಕುರಿಗಳ ಮಂದೆಯನ್ನು ಕಾಯುವುದು. ನಾಯಿಗೆ ಈಜುವುದಕ್ಕೆ ಕೂಡ ಬರುವುದು. ನಿತ್ಯವೂ ಅದಕ್ಕೆ ಅನ್ನ, ಹಿಟ್ಟು, ಹಾಲು ಇವುಗಳನ್ನು ಹಾಕುತ್ತೇನೆ. ಅದಕ್ಕೆ ಮಾಂಸವೂ ಇಷ್ಟ.

ಪ್ರಾತಃಕಾಲ. ಮಧ್ಯಾಹ್ನ. ಬ್ರಾಹ್ಮಣ.
ಚಿಹ್ನೆ. ಉತ್ಕೃಷ್ಟ.

**ಹೇಳಿ ಬರೆಯಿಸಿ:—**

ಹನ್ನೊಂದು. ಎಲ್ಲೆಲ್ಲೂ. ದಿವ್ಯ. ಮುತ್ತೈದೆ.
ಭಾಗ್ಯ. ಒಪ್ಪೊತ್ತು.

### ೫೬ನೆಯ ಪಾಠ.

## ಒಳ್ಳೆಯ ಹುಡುಗ.

ರಾಮನು ಒಳ್ಳೆಯ ಹುಡುಗ. ಅವನು ಪಾಠವನ್ನು ತಪ್ಪದೆ ಓದುತ್ತಾನೆ. ಮನೆಯಲ್ಲಿ ತಂದೆತಾಯಿಗಳು ಹೇಳಿದಂತೆ ಕೇಳುತ್ತಾನೆ. ಮಠದಲ್ಲಿ ಉಪಾಧ್ಯಾಯರು ಹೇಳಿದಂತೆ ಕೇಳುತ್ತಾನೆ. ಯಾರ ಗೋಜಿಗೂ ಹೋಗುವುದಿಲ್ಲ. ಯಾರನ್ನೂ ಬೈಯುವುದಿಲ್ಲ. ಮಠಕ್ಕೆ ತಪ್ಪಿಸಿಕೊಳ್ಳುವುದಿಲ್ಲ. ಹೊತ್ತಿಗೆ ಸರಿಯಾಗಿ ಮಠಕ್ಕೆ ಹೋಗುತ್ತಾನೆ. ತನ್ನ ಬಟ್ಟೆಗಳನ್ನೂ ಪುಸ್ತಕಗಳನ್ನೂ ಒಪ್ಪವಾಗಿ ಇಟ್ಟುಕೊಂಡು ಇರುತ್ತಾನೆ.

### ೫೭ನೆಯ ಪಾಠ.

## ಓಡೋಣ.

ರಾಮ— ಕೃಷ್ಣ, ನಾನೂ ನೀನೂ ಓಡೋಣವೆ? ನೀನು ಮುಂದೊ, ನಾನು ಮುಂದೊ, ನೋಡೋಣ.

ಕೃಷ್ಣ— ಹಾಗೇ ಆಗಲಿ. ಓಡೋಣ, ಬಾ.

ರಾಮ— ನಾನೂ ಕೃಷ್ಣನೂ ಓಡುತ್ತೇವೆ. ರಂಗ, ನೀನು ನೋಡುತ್ತಾ ಇರು.

ರಂಗ— ಆಗಲಿ, ನೀವಿಬ್ಬರೂ ಇಲ್ಲಿ ಬನ್ನಿ. ಸರಿಯಾಗಿ ನಿಲ್ಲಿ. ನಾನು ಹುಂ ಎನ್ನುತಲೆ ಓಡಿ. ಕೃಷ್ಣ, ನೀನು ಇನ್ನು ಕೊಂಚ ಹಿಂದಕ್ಕೆ ನಿಲ್ಲು.

ರಂಗನು ಹುಂ ಎಂದನು.

ರಾಮನೂ ಕೃಷ್ಣನೂ ಓಡಿದರು. ರಾಮ ಹಿಂದೆ ಬಿದ್ದ. ಕೃಷ್ಣ ಗೆದ್ದ.

## ೫೮ನೆಯ ಪಾಠ.



# ಹಸು.

ಇಗೋ, ಹಸು. ಅದಕ್ಕೆ ಎರಡು ಕೊಂಬುಗಳು ಇವೆ. ಅದು ಹಾಯುವುದಿಲ್ಲ. ನಾನು ಮುಟ್ಟುತ್ತೇನೆ, ನೋಡು. ಅದು ಏನೂ ಮಾಡುವುದಿಲ್ಲ. ಸುಮ್ಮನೇ ಇದೆ.

ಹಸುವಿಗೆ ಕರುವಿನ ಮೇಲೆ ಪ್ರೀತಿ. ಕರುವಿಗೆ ಹಸುವಿನ ಮೇಲೆ ಪ್ರೀತಿ. ಕರುವು ಹಸುವನ್ನು ಕಂಡರೆ, ಅದರ ಹತ್ತಿರಕ್ಕೆ ಓಡಿಹೋಗುವುದು. ಹಸು ಹಾಲು ಕೊಡುವುದು. ಹಾಲು ಎಷ್ಟು ರುಚಿ! ಹಾಲನ್ನು ಕುಡಿಯುತ್ತೇವೆ; ಅನ್ನಕ್ಕೆ ಹಾಕಿಕೊಳ್ಳುತ್ತೇವೆ. ಹಾಲು ಕಾಯಿಸಿ ಹೆಪ್ಪು ಹಾಕಿದರೆ, ಮೊಸರು ಆಗುವುದು. ಮೊಸರನ್ನು ಕಡೆದರೆ, ಬೆಣ್ಣೆ ಬರುವುದು. ಬೆಣ್ಣೆಯನ್ನು ಕಾಯಿಸಿದರೆ, ತುಪ್ಪವಾಗುವುದು. ಹಸುವಿಗೆ ಒಳ್ಳೆಯ ಹುಲ್ಲು, ಹಿಂಡಿ, ತವುಡು ಇವುಗಳನ್ನು ಹಾಕಿ ಸಾಕಬೇಕು.

## ೪೯ನೆಯ ಪಾಠ.

# ಚೆಂಡು.

ರಾಮ— ರಂಗ, ಈ ಚೆಂಡು ನೋಡು, ಎಷ್ಟು ಚೆನ್ನಾಗಿದೆ! ಇದು ಜಾಲೀ ಚೆಂಡು. ಆಡೋಣ, ಬಾ. ಭೀಮ, ಶಾಮ, ಕೃಷ್ಣ, ಶಂಕರ, ನೀವೂ ಬನ್ನಿ.

ರಂಗ— ರಾಮ, ನಿನ್ನ ಕಡೆ ಎಷ್ಟು ಮಂದಿ?

ರಾಮ— ನನ್ನ ಕಡೆ ಮೂರು ಮಂದಿ.

ರಂಗ— ಎಣಿಸು.

ರಾಮ— ನೋಡು, ಶಂಕರ ಒಬ್ಬ, ನಾನು ಒಬ್ಬ, ಶಾಮನು ಒಬ್ಬ. ಅಂತು ಮೂವರು. ನಿನ್ನ ಕಡೆಗೋ?

ರಂಗ— ನನ್ನ ಕಡೆಗೂ ಮೂವರೇ.

ರಾಮ— ಮೊದಲಾಟ ನಮ್ಮದು.

ರಂಗ— ಆಗಲಿ, ಆಡಿ. ಭೀಮ, ನೀನು ಇಲ್ಲಿ ನಿಲ್ಲು. ಕೃಷ್ಣ, ಇನ್ನೂ ದೂರ ಹೋಗು. ಜೋಕೆ, ಬುತ್ತಿ ಬಂದರೆ, ಬಿಡಬೇಡ.

ರಾಮ— ಹೊಡೆಯಲೋ?

ರಂಗ— ಹೊಡೆ.

ಅಗೋ, ಬುತ್ತಿ ಬಂತು. ಭೀಮ ಬುತ್ತಿ ಹಿಡಿದ. ರಾಮನ ಆಟ ಆಯಿತು. ಇನ್ನು ಮೇಲೆ ರಂಗನ ಆಟ. ಅವನ ಆಟವೂ ಆಯಿತು.

ಸರಿ. ಈಗ ಅವರ ಆಟವೂ ಆಯಿತು. ನಮ್ಮ ಆಟವೂ ಆಯಿತು. ಗೆದ್ದವರು ಯಾರು? ನಾವೇ.

## ಬಾಯಿಪಾಟ— ಹಾಡು.

ರಾಗ— ಡೋಮರ. ಆದಿತಾಳ.

ಆಡೋಣ ಬನ್ನಿರಿ | ಕೂಡುತೆಲ್ಲರು | ಚೆಂಡ || ಪಲ್ಲ ||

ಓದಿಯೋದಿ ಬೇಸರೆಮ | ಗಾದುದೀಗಳೆ | ಹೋಗಿ ||
ಬೀದಿಚೌಕದಲ್ಲಿ ಬಹು | ಮೋದದಿಂದಲೆ[೧] | ಚೆಂಡ ||೧||

ಆರು ಮಂದಿಯಲ್ಲಿ ಬೇರೆ | ಬೇರೆಯಾಗುತ | ನಾವು ||
ಮೂರುಮೂರು ಮಂದಿ ಜೋಡಿ | ಸೇರಿ ಸಾರುತ[೨] | ಚೆಂಡ||೨||

ದಾಂಡಿನಿಂದ ಹೊಡೆಯಿರಣ್ಣ | ಚೆಂಡನಿತ್ತಲೆ | ಅದ ||
ಕೊಂಡು ನಾವು ಹಾಕಲೆಣಿಸಿ | ಕೊಂಡುಹೋಗಲೆ | ಚೆಂಡ ||೩||

ಅತ್ತ ನೋಡಬೇಡ ತಲೆ | ಯೆತ್ತಿ ನೋಡಣ್ಣ | ಮೇಲೆ ||
ಬುತ್ತಿ ಬರುವುದು ಬಿಡ | ದೊತ್ತಿ ಹಿಡಿಯಣ್ಣ | ಚೆಂಡ ||೪||

ಏಳು ಜುಕ್ಕು ಪೂರೈಸಿತು | ಏಳು ಗುಡುಗಲೂ | ಬರಿದೆ ||
ಹಾಳು ಹರಟೆಯಾಡದೇನೂ | ಹೇಳದೀಗಲೂ | ಚೆಂಡ ||೫||

**(ಪಂಡಿತ ಜಯರಾಯಾಚಾರ್ಯರಿಂದ.)**

೧. ಮೋದದಿಂದಲೆ = ಸಂತೋಷದಿಂದಲೆ. ೨ ಸಾರುತ = ಹೋಗುತ್ತ.

---

## ೬೦ನೆಯ ಪಾಠ.

# ಬೆಕ್ಕು.

ನಾನು ಬೆಕ್ಕು. ನೀವು ಹುಲಿಯನ್ನು ನೋಡಿದ್ದೀರೋ! ನನ್ನ ಮುಖವು ಅದರ ಮುಖದಂತೆ ಇದೆ; ಆದರೆ ಅಷ್ಟು ದೊಡ್ಡದಲ್ಲ.



ನಾನು ಮನೆಯಲ್ಲಿ ಇದ್ದರೆ, ಇಲಿಯು ಸುಳಿಯುವುದಿಲ್ಲ. ಅದು ನನಗೆ ಅಂಜುವುದು. ನನ್ನನ್ನು ಕಾಣುತಲೆ ಅದು ಓಡಿಹೋಗುವುದು. ನಾನು ಎಷ್ಟು ದೂರ ಬೇಕಾದರೆ ಅಷ್ಟು ದೂರ ನೆಗೆಯಬಲ್ಲೆ. ಏಣಿಯಿಲ್ಲದೆ ಅಟ್ಟದ ಮೇಲಕ್ಕೆ ಹತ್ತಬಲ್ಲೆ. ನನಗೆ ಮೊನೆಯಾದ ಹಲ್ಲುಗಳೂ ಉಗುರುಗಳೂ ಇವೆ. ಇಲಿಯನ್ನು ಕಂಡರೆ, ನಾನು ಎಂದಿಗೂ ಬಿಡೆ. ಅದನ್ನು ತಿಂದುಬಿಡುವೆನು.

ಕಂದ— ಎಲೆ ಬೆಕ್ಕೆ ರೂಪಿನಿಂದಲೆ |
ಹುಲಿಜಾತಿಗೆ ಸೇರ್ದ್ವೆನೆಂದು[೧] ಗರ್ವಿಸಬೇಡಾ ||
ಬಲುಮೆಯು[೨] ನಿನ್ನಲಿಹುದೇ |
ನಿಲಿಗಳ ಹಿಡಿವುದರೊಳಾಯ್ತು ನಿನ್ನಯ ಶೌರ್ಯಂ ||

**(ಪಂಡಿತ ಜಯರಾಯಾಚಾರ್ಯರಿಂದ)**

೧. ಸೇರ್ದ್ವೆನೆಂದು = ಸೇರಿರುವೆನೆಂದು ೨. ಬಲುಮೆಯು = ಶಕ್ತಿಯು.

---

## ೬೧ನೆಯ ಪಾಠ.

# ಕಣ್ಣುಮುಚ್ಚಾಲೆ.

ರುಕ್ಮಿಣಿ, ಆಡೋಣ, ಬರುತ್ತೀಯಾ?

ಏನಾಡೋಣ, ಜಾನಕಿ, ಕಣ್ಣುಮುಚ್ಚಾಲೆ ಆಡೋಣವೇ?

ಆಡೋಣ. ಲಕ್ಷ್ಮಿಯನ್ನು ಕರೆ; ಗೌರಿ, ಸೀತೆ, ಭಾಗೀರಥಿ, ಕಾವೇರಿ, ಇವರೆಲ್ಲರೂ ಬರಲಿ.

ಗೌರಿ, ನೀನು ಅಜ್ಜಿ. ಸೀತೆ, ನೀನು ಕೋಳಿ.

ಸೀತೆ, ಬಾ, ಕಣ್ಣು ಮುಚ್ಚುತ್ತೇನೆ.

ಕಣ್ಣಾಮಚ್ಚೆ ಕಾಡೇ ಗೂಡೆ ಉದ್ದಿನ ಮೂಡೆ ಉರುಳೇಹೋಯ್ತು. ನಮ್ಮ ಹಕ್ಕಿ ಬಿಟ್ಟೆನೋ ಬಿಟ್ಟೆ. ನಿಮ್ಮ ಹಕ್ಕಿ ಮುಚ್ಚಿಕೊಳ್ಳಿರೋ ಮುಚ್ಚಿಕೊಳ್ಳಿ.

ಎಲ್ಲರೂ ಎಲ್ಲಿ ಹೋದರು? ಚಿಕ್ಕಮನೆಯಲ್ಲಿ ನೋಡುತ್ತೇನೆ. ಇಲ್ಲಿ ಇಲ್ಲ. ಮಂಚದ ಕೆಳಗೂ ಇಲ್ಲ. ಅಲ್ಲಿ ಯಾರು ಬಾಗಿಲ ಹಿಂದೆ? ಅಗೋ, ಲಕ್ಷ್ಮಿ! ಲಕ್ಷ್ಮಿ ಸಿಕ್ಕಿದಳು.

ಲಕ್ಷ್ಮಿ ಸೀತೆಯ ಕೈಗೆ ಸಿಕ್ಕಿದಳು. ಈಗ ಲಕ್ಷ್ಮಿಯೇ ಕೋಳಿ.

ಲಕ್ಷ್ಮಿ, ಈಗ ನೀನು ಕಣ್ಣು ಮುಚ್ಚಿಸಿಕೊ.

---

## ಬಾಯಿಪಾಟ— ಹಾಡು.

ರಾಗ— ಜಲಾಪ್. ಆದಿತಾಳ

(ಪಾರಿತು ಪಾರಿತು ಘಡ ಮೃಗ)

ಬಾಲೆಯರೆಲ್ಲ ಬನ್ನಿ | ರಾಲಸ್ಯವೇಕೆ॰ || ಪಲ್ಲ ||
ಲೀಲೆಯಿಂ ಕಣ್ಣಮು | ಚ್ಚಾಲೆಯನಾಡುವ || ಅನುಪಲ್ಲ||

ತಂಟೆ ಮಾಡದೆ ಮುಟ್ಟಿ | ರಂಟಿದ ಬೆರಲನು |
ತುಂಟಿ ರಂಗೂ ಮೇಲೆ | ಅಂಟು ಬಂದಿಹುದು || ೧ ||

ಶಿವೆಯಜ್ಜಿಯಾಗಲಿ | ಇವಳ ಕಣ್ಣುಗಳನ್ನು |
ಜವದೊಳು[೨] ಮುಚ್ಚು ನೀ | ನವಿತು ಕೊಳ್ಳುವೆವು || ೨ ||

ಬಿಟ್ಟೆನಿವಳ ಕಣ್ಣ | ಪುಟ್ಟಗುಬ್ಬಚ್ಚಿಯೇ |
ಥಟ್ಟನೆ ಬರಬೇಡ | ಅಟ್ಟದ ಮೇಲಿರು || ೩ ||

ಹಕ್ಕಿಗಳೆಲ್ಲ ಬನ್ನಿ | ಸಿಕ್ಕಿದಳೀ ಸೀತೆ |
ದಕ್ಕದೆ ಹೋಗುವ | ಳಕ್ಕನ ಮನೆಗೆ || ೪ ||

೧.ಆಲಸ್ಯವು = ತಡವು. ೨. ಜವದೊಳು = ಬೇಗ.

---

ರಾಗ— ಚೌಪದಿ. ದ್ವಿಪದೆ. ಜೋಗುಳ.

ಮಲಗು ಮಲಗೆಲೆ ಬೊಂಬೆ | ಅಳಬೇಡವೆಂಬೆ |
ನಲವಿಂದ[೧] ತಟ್ಟಿ ಜೋ | ಗುಳವ ಹೇಳುವೆನು || ೧ ||

ಕೋಳಿ ಕೂಗುವ ವರೆಗು | ಏಳಬೇಡಮ್ಮ |
ಗೋಳಾಡದಿರು ನಿನಗೆ | ಹಾಲ ಹಾಕುವೆನು || ೨ ||

ಹೊತ್ತು[೨] ಮೂಡಿತು ಮತ್ತೆ | ಹೊತ್ತಾಯಿತೇಳು |
ಅತ್ತಿತ್ತ ತಿರುಗದಿರು | ಎತ್ತಿಕೊಳ್ಳುವೆನು || ೩ ||

ಮಿಗಿಲು[೩] ಹೊತ್ತಾಯಿತಡಿ | ಗೆಗೆ ಹೋಗಬೇಕು |
ಮಗುವೆ ಬಾರೆನ್ನೊಡನೆ | ಹಗರಣವು[೪] ಸಾಕು || ೪ ||

(ಪಂಡಿತ ಜಯರಾಯಾಚಾರ್ಯರಿಂದ.)

೧. ನಲವಿಂದ = ಪ್ರೀತಿಯಿಂದ; ೨. ಹೊತ್ತು = ಸೂರ್ಯ; ೩. ಮಿಗಿಲು = ಹೆಚ್ಚು; ೪. ಹಗರಣ = ಅವಾಂತರ, ಲೂಟಿ.

---

## ಮಕ್ಕಳನ್ನು ತೂಗುವಾಗ ಹೇಳುವ ಹಾಡು.

(ತ್ರಿಪದಿಪ್ರಭೇದ)

ಯಾಕಳುವೆಯೆಲೆ ರಂಗ |
ಬೇಕಾದ್ದು ನಿನಗಿದೆ |
ನಾಕೆಮ್ಮೆ ಕರೆದ ನೊರೆಹಾಲು ||
ನೊರೆಹಾಲು ಸಕ್ಕರೆ |
ನೀ ಕೇಳಿದಾಗ ಕೊಡುವೆನು || ೧ ||

ಹಾಲ್ಬೇಡಿ ಹರಿದತ್ತ |
ನೀರ್ಬೇಡಿ ನಿಂದತ್ತ |
ಮೊಸರ್ಬೇಡಿ ಕೆಸರ ತುಳಿದತ್ತ ||
ತುಳಿದತ್ತ ಕೃಷ್ಣಯ್ಯ |
ಹಸುರಂಗಿ ಕೇಳಿ ಹಸಿದನು || ೨ ||

ಚಾಡಿಕಾರರ ಸಂಗ |
ಕೂಡಿಯಾಡಲೆ ಬೇಡ |
ಕಾಡುತ್ತಿಲೆನ್ನನಳಬೇಡ ||
ಅಳಬೇಡ ಕಂದಯ್ಯ |
ಆಡಾಡು ಬುತ್ತಿ ಹಾಕುವೇ || ೩ ||

ಅಂಗಿಯ ತೊಟ್ಟರೆ |
ರಂಗನಾ ಸರಿಯೆಂಬೆ |
ಚುಂಗು ಬಿಟ್ಟರೆ ನವಿಲೆಂಬೆ ||
ನವಿಲೆಂಬೆ ಕೃಷ್ಣಯ್ಯ |
ಶೃಂಗಾರವಾಗೆ ದೊರೆಯೆಂಬೇ || ೪ ||

ಅತ್ತು ಕಾಡುವನಲ್ಲ |
ಮತ್ತೆ ಬೇಡುವನಲ್ಲ |
ಎತ್ತಿಕೊಳ್ಳೆಂಬಾ ಹಟವಿಲ್ಲ ||
ಹಟವಿಲ್ಲ ನಿನ್ನಂಥ |
ಹತ್ತು ಮಕ್ಕಳು ಇರಬಹುದು || ೫ ||

ಚಂದಿರ[೨]ನನಿಲ್ಲೆನಗೆ |
ತಂದು ಕೊಡಬೇಕೆಂದು |
ಕಂದ ನೀನತ್ತು ಹೊರಳುವರೆ ||
ಹೊರಳುವರೆ ನಿನ್ನಂಥ |
ನಂದನನ[೩] ಕಾಣೆ ಜಗದೊಳಗೆ || ೬ ||

೧. ಕಾಡುತ್ತ = ಹಿಂಸೆ ಮಾಡುತ್ತ. ೨. ಚಂದಿರ = ಚಂದ್ರ. ೩. ನಂದನನ = ಮಗನನ್ನು

# ಅಂಕಿಗಳು.

| | | | |
|---|---|---|---|
| ೦ | ಒಂದು | ೧ | 1 |
| ೦೦ | ಎರಡು | ೨ | 2 |
| ೦೦೦ | ಮೂರು | ೩ | 3 |
| ೦೦೦೦ | ನಾಲ್ಕು | ೪ | 4 |
| ೦೦೦೦೦ | ಐದು | ೫ | 5 |
| ೦೦೦೦೦೦ | ಆರು | ೬ | 6 |
| ೦೦೦೦೦೦೦ | ಏಳು | ೭ | 7 |
| ೦೦೦೦೦೦೦೦ | ಎಂಟು | ೮ | 8 |
| ೦೦೦೦೦೦೦೦೦ | ಒಂಬತ್ತು | ೯ | 9 |
| ೦೦೦೦೦೦೦೦೦೦ | ಹತ್ತು | ೧೦ | 10 |



# ಎಣಿಕೆ.

| | | | | | |
|---|---|---|---|---|---|
| ೧ | ಒಂದು | ೧೧ | ಹನ್ನೊಂದು | ೨೧ | ಇಪ್ಪತ್ತೊಂದು |
| ೨ | ಎರಡು | ೧೨ | ಹನ್ನೆರಡು | ೨೨ | ಇಪ್ಪತ್ತೆರಡು |
| ೩ | ಮೂರು | ೧೩ | ಹದಿಮೂರು | ೨೩ | ಇಪ್ಪತ್ತುಮೂರು |
| ೪ | ನಾಲ್ಕು | ೧೪ | ಹದಿನಾಲ್ಕು | ೨೪ | ಇಪ್ಪತ್ತುನಾಲ್ಕು |
| ೫ | ಐದು | ೧೫ | ಹದಿನೈದು | ೨೫ | ಇಪ್ಪತ್ತೈದು |
| ೬ | ಆರು | ೧೬ | ಹದಿನಾರು | ೨೬ | ಇಪ್ಪತ್ತಾರು |
| ೭ | ಏಳು | ೧೭ | ಹದಿನೇಳು | ೨೭ | ಇಪ್ಪತ್ತೇಳು |
| ೮ | ಎಂಟು | ೧೮ | ಹದಿನೆಂಟು | ೨೮ | ಇಪ್ಪತ್ತೆಂಟು |
| ೯ | ಒಂಬತ್ತು | ೧೯ | ಹತ್ತೊಂಬತ್ತು | ೨೯ | ಇಪ್ಪತ್ತೊಂಬತ್ತು |
| ೧೦ | ಹತ್ತು | ೨೦ | ಇಪ್ಪತ್ತು | ೩೦ | ಮೂವತ್ತು |
| ೩೧ | ಮೂವತ್ತೊಂದು | ೪೧ | ನಲವತ್ತೊಂದು | ೫೧ | ಐವತ್ತೊಂದು |
| ೩೨ | ಮೂವತ್ತೆರಡು | ೪೨ | ನಲವತ್ತೆರಡು | ೫೨ | ಐವತ್ತೆರಡು |
| ೩೩ | ಮೂವತ್ತುಮೂರು | ೪೩ | ನಲವತ್ತುಮೂರು | ೫೩ | ಐವತ್ತುಮೂರು |
| ೩೪ | ಮೂವತ್ತುನಾಲ್ಕು | ೪೪ | ನಲವತ್ತುನಾಲ್ಕು | ೫೪ | ಐವತ್ತುನಾಲ್ಕು |
| ೩೫ | ಮೂವತ್ತೈದು | ೪೫ | ನಲವತ್ತೈದು | ೫೫ | ಐವತ್ತೈದು |
| ೩೬ | ಮೂವತ್ತಾರು | ೪೬ | ನಲವತ್ತಾರು | ೫೬ | ಐವತ್ತಾರು |
| ೩೭ | ಮೂವತ್ತೇಳು | ೪೭ | ನಲವತ್ತೇಳು | ೫೭ | ಐವತ್ತೇಳು |
| ೩೮ | ಮೂವತ್ತೆಂಟು | ೪೮ | ನಲವತ್ತೆಂಟು | ೫೮ | ಐವತ್ತೆಂಟು |
| ೩೯ | ಮೂವತ್ತೊಂಬತ್ತು | ೪೯ | ನಲವತ್ತೊಂಬತ್ತು | ೫೯ | ಐವತ್ತೊಂಬತ್ತು |
| ೪೦ | ನಲವತ್ತು | ೫೦ | ಐವತ್ತು | ೬೦ | ಆರುವತ್ತು |

| | | | | |
|---|---|---|---|---|
| ೬೧ | ಅರುವತ್ತೊಂದು | ೭೧ | ಎಪ್ಪತ್ತೊಂದು | ೫ |
| ೬೨ | ಅರುವತ್ತೆರಡು | ೭೨ | ಎಪ್ಪತ್ತೆರಡು | ೧೦ |
| ೬೩ | ಅರುವತ್ತುಮೂರು | ೬೩ | ಎಪ್ಪತ್ತುಮೂರು | ೧೫ |
| ೬೪ | ಅರುವತ್ತುನಾಲ್ಕು | ೬೪ | ಎಪ್ಪತ್ತುನಾಲ್ಕು | ೨೦ |
| ೬೫ | ಅರುವತ್ತೈದು | ೭೫ | ಎಪ್ಪತ್ತೈದು | ೨೫ |
| ೬೬ | ಅರುವತ್ತಾರು | ೭೬ | ಎಪ್ಪತ್ತಾರು | ೩೦ |
| ೬೭ | ಅರುವತ್ತೇಳು | ೭೭ | ಎಪ್ಪತ್ತೇಳು | ೩೫ |
| ೬೮ | ಅರುವತ್ತೆಂಟು | ೭೮ | ಎಪ್ಪತ್ತೆಂಟು | ೪೦ |
| ೬೯ | ಅರುವತ್ತೊಂಬತ್ತು | ೭೯ | ಎಪ್ಪತ್ತೊಂಬತ್ತು | ೪೫ |
| ೭೦ | ಎಪ್ಪತ್ತು | ೮೦ | ಎಂಬತ್ತು | ೫೦ |
| ೮೧ | ಎಂಬತ್ತೊಂದು | ೯೧ | ತೊಂಬತ್ತೊಂದು | ೫೫ |
| ೮೨ | ಎಂಬತ್ತೆರಡು | ೯೨ | ತೊಂಬತ್ತೆರಡು | ೬೦ |
| ೮೩ | ಎಂಬತ್ತುಮೂರು | ೯೩ | ತೊಂಬತ್ತುಮೂರು | ೬೫ |
| ೮೪ | ಎಂಬತ್ತು ನಾಲ್ಕು | ೯೪ | ತೊಂಬತ್ತು ನಾಲ್ಕು | ೭೦ |
| ೮೫ | ಎಂಬತ್ತೈದು | ೯೫ | ತೊಂಬತ್ತೈದು | ೭೫ |
| ೮೬ | ಎಂಬತ್ತಾರು | ೯೬ | ತೊಂಬತ್ತಾರು | ೮೦ |
| ೮೭ | ಎಂಬತ್ತೇಳು | ೯೭ | ತೊಂಬತ್ತೇಳು | ೮೫ |
| ೮೮ | ಎಂಬತ್ತೆಂಟು | ೯೮ | ತೊಂಬತ್ತೆಂಟು | ೯೦ |
| ೮೯ | ಎಂಬತ್ತೊಂಬತ್ತು | ೯೯ | ತೊಂಬತ್ತೊಂಬತ್ತು | ೯೫ |
| ೯೦ | ತೊಂಬತ್ತು | ೧೦೦ | ನೂರು | ೧೦೦ |



# ಮಗ್ಗಿ.

| ೧ | | | ೨ | | | ೩ | | |
|---|---|---|---|---|---|---|---|---|
| ೧ | ಲು | ೧ | ೧ | ಲು | ೨ | ೧ | ಲು | ೩ |
| ೨ | ಲು | ೨ | ೨ | ಲು | ೪ | ೨ | ಲು | ೬ |
| ೩ | ಲು | ೩ | ೩ | ಲು | ೬ | ೩ | ಲು | ೯ |
| ೪ | ಲು | ೪ | ೪ | ಲು | ೮ | ೪ | ಲು | ೧೨ |
| ೫ | ಲು | ೫ | ೫ | ಲು | ೧೦ | ೫ | ಲು | ೧೫ |
| ೬ | ಲು | ೬ | ೬ | ಲು | ೧೨ | ೬ | ಲು | ೧೮ |
| ೭ | ಲು | ೭ | ೭ | ಲು | ೧೪ | ೭ | ಲು | ೨೧ |
| ೮ | ಲು | ೮ | ೮ | ಲು | ೧೬ | ೮ | ಲು | ೨೪ |
| ೯ | ಲು | ೯ | ೯ | ಲು | ೧೮ | ೯ | ಲು | ೨೭ |
| ೧೦ | ಲು | ೧೦ | ೧೦ | ಲು | ೨೦ | ೧೦ | ಲು | ೩೦ |

| ೪ | | | ೫ | | |
|---|---|---|---|---|---|
| ೧ | ಲು | ೪ | ೧ | ಲು | ೫ |
| ೨ | ಲು | ೮ | ೨ | ಲು | ೧೦ |
| ೩ | ಲು | ೧೨ | ೩ | ಲು | ೧೫ |
| ೪ | ಲು | ೧೬ | ೪ | ಲು | ೨೦ |
| ೫ | ಲು | ೨೦ | ೫ | ಲು | ೨೫ |
| ೬ | ಲು | ೨೪ | ೬ | ಲು | ೩೦ |
| ೭ | ಲು | ೨೮ | ೭ | ಲು | ೩೫ |
| ೮ | ಲು | ೩೨ | ೮ | ಲು | ೪೦ |
| ೯ | ಲು | ೩೬ | ೯ | ಲು | ೪೫ |
| ೧೦ | ಲು | ೪೦ | ೧೦ | ಲು | ೫೦ |

# ಚ. ವಾಸುದೇವಯ್ಯನವರು : ಒಂದು ಸ್ಮರಣೆ

“ಶುದ್ಧ ಭಾಷಾಭಿಮಾನಿಗಳು ವಾಸುದೇವಯ್ಯನವರ ‘ಬಾಲಬೋಧೆ’ಯನ್ನೂ ಎಸ್. ಜಿ. ನರಸಿಂಹಾಚಾರ್ಯರ ‘ಪದ್ಯಸಂಗ್ರಹ’, ‘ಪದ್ಯಸಾರ’ಗಳನ್ನೂ ವಿದ್ಯಾ ಇಲಾಖೆಯಲ್ಲಿ ಅವಶ್ಯ ಪಠ್ಯಪುಸ್ತಕಗಳಾಗುವಂತೆ ಮಾಡಬೇಕೆಂದು ನಾನು ಕೈಮುಗಿದು ಬೇಡುತ್ತೇನೆ.”

ಹೀಗೆ ವಿಜ್ಞಾಪಿಸಿದವರು ನಮ್ಮ ಕಾಲದ ಧೀಮಂತಸಾಹಿತಿಯಾಗಿದ್ದ ಡಿ. ವಿ. ಗುಂಡಪ್ಪನವರು (ಜ್ಞಾಪಕ ಚಿತ್ರಶಾಲೆ, ಸಂ ೩ : ‘ಸಾಹಿತ್ಯೋಪಾಸಕರು’, ೧೯೭೦, ಪು. ೬೯).

ಚ. ವಾಸುದೇವಯ್ಯನವರನ್ನು ಸ್ಮರಿಸಿ ಬರೆದ ಲೇಖನದಲ್ಲಿ ‘ಕನ್ನಡ ಬಾಲಬೋಧೆ’ ಎಂಬ ಸ್ವತಂತ್ರವಾದ ಪ್ರಕರಣವಿದ್ದು, ಅದರ ಕೊನೆಗೆ ಮೇಲೆ ಉದ್ಧರಿಸಿದ ಮಾತು ಬಂದಿದೆ.

ಪ್ರಕರಣದ ಉದ್ದಕ್ಕೆ ಅವರ ವಿಷಾದದ ದನಿಯಿದೆ. “ಈ ಪುಸ್ತಕವನ್ನು ಪಾಠಶಾಲೆಯ ಉಪಯೋಗದಿಂದ ತಪ್ಪಿಸಿದ್ದು ಭಾಷಾಬೋಧನೆಗೆ ಮೂಲದಲ್ಲಿ ಕೊಡಲಿ ಇಟ್ಟಂತಾಗಿದೆ. ಯಾರ ಮೇಲಿನ ದ್ವೇಷಾಸೂಯೆಗಳೋ ಇನ್ನಾರ ಮೇಲೋ ಬಿದ್ದು, ನಷ್ಟವು ದೇಶದ ಬಾಲವಿದ್ಯಾರ್ಥಿಗಳಿಗೂ ಭಾಷೆಗೂ ತಪ್ಪದ್ದಾಗಿದೆ.”ಇದಕ್ಕೆ ಜವಾಬ್ದಾರರಾದವರು, “ಅವರು ಯಾರಾದರಾಗಲಿ, ಅವರು ಅವಶ್ಯವಾದದ್ದನ್ನು ಮಾಡಿದವರಲ್ಲ, ಹಿತಕರವಾದದ್ದನ್ನು ಮಾಡಿದವರೂ ಅಲ್ಲ; ಅಕಾರಣವಾಗಿ ಮಲ್ಲಿಗೆಯನ್ನು ಆಚೆಗೆ ನೂಕಿ ಅದರ ಜಾಗದಲ್ಲಿ ಲಾಂಟಾನಾ ಹೂವನ್ನು ತಂದಿಟ್ಟವರು.”

ಇನ್ನೊಬ್ಬ ಹಿರಿಯ ಸಾಹಿತಿಗಳ ಮಾತು ನೋಡೋಣ : “ಮೈಸೂರ ನಾಡ ಮಕ್ಕಳಿಗೆ ಮೊದಲು ಆ–ಟ ಕಲಿಸಿ, ಅನಂತರ ಊ–ಟ ಮಾಡಿಸಿ, ಕಡೆಯದಾಗಿ ಓ–ಟ ಓಡಿಸಿ ತಮ್ಮ ‘ಕನ್ನಡ ಬಾಲಬೋಧೆ’ಯಿಂದ ಕನ್ನಡ ನುಡಿಯನ್ನು ಕಲಿಸಿದ ಶ್ರೀಮಾನ್ ಚ. ವಾಸುದೇವಯ್ಯನವರು ‘ಚಿನ್ನದ ನಾಡಿನ, ಗಂಧದ ಬೀಡಿನ’ ತಾತಯ್ಯನವರು. ಈಗ್ಗೆ ಸುಮಾರು ಎರಡು ತಲೆಮಾರಿನಿಂದ ಅವರ ಬಾಲಬೋಧೆಯಿಂದ ಎಷ್ಟು ಸಾವಿರ ಮಕ್ಕಳು ವಿದ್ಯಾಭ್ಯಾಸವನ್ನು ಆರಂಭಿಸಿ ಮುಂದುವರಿದಿರುವರೊ ಲೆಕ್ಕ ಮಾಡುವುದು ಕಷ್ಟ. ಆದರೆ ಇಷ್ಟು ಹೇಳಬಹುದು. ಈ ನಾಡಿನಲ್ಲಿ ಅವರ ಹೆಸರನ್ನರಿಯದವರು ವಿರಳ.”

ಹೀಗೆ ಆತ್ಮೀಯವಾಗಿ ಮೆಚ್ಚುಮಾತು ಬರೆದ ಹಿರಿಯ ಸಾಹಿತಿ ಎಂದರೆ ದ. ಕೃ. ಭಾರದ್ವಾಜರು (ಆರ್ಯಕೀರ್ತಿಯ ಶ್ರೀ ಚ. ವಾಸುದೇವಯ್ಯನವರು, ಕನ್ನಡ ನುಡಿ ಸೇವಕರು ೭, ಕನ್ನಡ ನುಡಿ, ೧-೩೪, ೨೬-೫-೧೯೩೯, ಪು. ೨೭೫-೭೬).

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಚ. ವಾಸುದೇವಯ್ಯನವರ ಭಾವಚಿತ್ರವನ್ನು ಅನಾವರಣಮಾಡಿ ಅಭಿನಂದಿಸಿದ ಸಂದರ್ಭದಲ್ಲಿ (೨೮-೩-೧೯೪೩). ಅಂದಿನ ಸಭಾಧ್ಯಕ್ಷರಾಗಿದ್ದ ದಿವಾನ್ ಎನ್. ಮಾಧವರಾಯರು ತಮ್ಮ ಗೌರವ ಪ್ರಕಟಿಸಿದ್ದು ಹೀಗೆ :

"ವೃದ್ಧರಾದ ಶ್ರೀ ಚನ್ನಪಟ್ಟಣ ವಾಸುದೇವಯ್ಯನವರು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪಿತಾಮಹ ಭೀಷ್ಮರಾಗಿದಾರೆ. ಈಗ ಕನ್ನಡದಲ್ಲಿ ಹೆಸರು ಗಳಿಸಿರುವ ಹಿರಿವಯಸ್ಸಿನ ಲೇಖಕರೂ ಮೊದಲಾಗಿ ಶ್ರೀ ವಾಸುದೇವಯ್ಯನವರ ಬಾಲಬೋಧೆಯಿಂದ ವಿದ್ಯಾರಂಭ ಮಾಡಿರಬೇಕು. ಈ ವಿಷಯದಲ್ಲಿ ನಮಗೆ ಆಶ್ಚರ್ಯ ಅನಾವಶ್ಯಕ."

ಆಗಲೇ ಅಭಿನಂದನಭಾಷಣ ಮಾಡಿದ, ಆ ಕಾಲದ ಗಣ್ಯ ಕತೆಗಾರರೂ ನಾಟಕಕಾರರೂ ಆಗಿದ್ದ ಎಸ್. ಜಿ. ಶಾಸ್ತ್ರಿಗಳು ಹೇಳಿದ್ದು : "ಅವರಿಗೆ ಎಲ್ಲರೂ ಬೇಕು. ಸರ್ವರಲ್ಲೂ ಪ್ರೀತಿ. ಅಜಾತಶತ್ರು, ಶಾಂತಮೂರ್ತಿ. ತಮ್ಮ ಶಕ್ತ್ಯನುಸಾರ ಮಕ್ಕಳ ಸೇವೆಯೇ ದೇವರ ಸೇವೆಯೆಂದು ನಂಬಿದಾರೆ. ಮಕ್ಕಳ ವಿಷಯ ಮಾತನ್ನಾಡುವುದರಲ್ಲಿ ಅವರಿಗೆ ಪರಮಾನಂದ. ಅವರ ಮುಖವನ್ನು ನೋಡಿದೊಡನೆಯೇ ಅವರ ಸರಳಹೃದಯ ಮತ್ತು ಶಾಂತಸ್ವಭಾವವು ಗೋಚರವಾಗುತ್ತಿರುತ್ತದೆ. . ."

"ಕನ್ನಡ ನಾಡಿನಲ್ಲಿ ಪ್ರತಿಯೊಬ್ಬ ಕನ್ನಡಿಗನ ಮನೆಯಲ್ಲೂ ವಾಸುದೇವಯ್ಯನವರ ಹೆಸರು ಶಾಶ್ವತವಾಗಿರುವುದು ಅವರ 'ಕನ್ನಡ ಬಾಲಬೋಧೆ'ಯಿಂದ. ಇದನ್ನು ಅವರು ಬರೆದು ಅರವತ್ತು ವರ್ಷಗಳ ಮೇಲಾಯಿತು. 'ನಾನು ಓದಿದ ಬಾಲಬೋಧೆಯನ್ನು ನನ್ನ ಮರಿಮಗುವೂ ಓದುತ್ತಿದೆ'ಯೆಂದು ಹಿಗ್ಗಿದ ಮಹನೀಯರನೇಕರನ್ನು ನಾನು ನೋಡಿದ್ದೇನೆ."

ಹೀಗೆ ಅವರ ಶೀಲಸ್ವಭಾವಗಳನ್ನೂ ಸಾಧನೆಗಳನ್ನೂ ನೆನೆದು, "He was a God's Good man and he sweetened life for others" ಎಂದು ಎದೆ ತುಂಬಿ ಪ್ರಶಂಸಿಸಿದ್ದಾರೆ (ಕನ್ನಡ ನುಡಿ :೫-೨೩, ೨-೪-೧೯೪೩, ಪು. ೧೨೧-೨೨).

ಚ. ವಾಸುದೇವಯ್ಯನವರು ತೀರಿಕೊಳ್ಳುತ್ತಿದ್ದಂತೆಯೇ 'ಕನ್ನಡ ನುಡಿ' ಪ್ರಕಟಿಸಿದ ಬಾಷ್ಪಾಂಜಲಿಬರೆಹದಲ್ಲಿ (೬-೧೩, ೭-೧-೧೯೪೪, ಪು. ೬೧-೬೩) ಸಹ ಮಾಸ್ತಿ

ವೆಂಕಟೇಶ ಅಯ್ಯಂಗಾರ್ ಅವರು ವಿಶೇಷವಾಗಿ ಬಾಲಬೋಧೆಯ ನೆನಪು ಮಾಡಿಕೊಂಡಿದ್ದಾರೆ.

"ವಾಸುದೇವಯ್ಯನವರ ಪಿತಾಮಹಪಟ್ಟ ಎಷ್ಟು ನಿಜವಾದದ್ದು ಎಂದು ಗ್ರಹಿಸುವುದು ಅನೇಕರಿಗೆ ಕಷ್ಟ. ಈಗ ದೊಡ್ಡ ಸಂಸಾರಗಳ ತಾತದಿರಾಗಿ ಮೊಮ್ಮಕ್ಕಳ ಮದುವೆ ಪ್ರಸ್ತ ನಡಸುತ್ತಿರುವ ಮಹನೀಯರು ಹಲವರು, ಮೊದಲು ಶಾಲೆಗೆ ಸೇರಿದಾಗ, ವಾಸುದೇವಯ್ಯನವರ 'ಬಾಲಬೋಧೆ'ಯಿಂದ ಅಕ್ಷರ ಕಲಿತರು. ಮಣ್ಣಿನಲ್ಲಿ ಬೆರಳಿಂದ ವರ್ಣಗಳನ್ನು ತಿದ್ದುವುದನ್ನು ಬಿಟ್ಟು, ಹುಣಿಸೆಯ ಬೀಜದಿಂದ ಅವುಗಳ ಆಕೃತಿಯನ್ನು ಜೋಡಿಸುವುದಕ್ಕೆ ಮೊದಲುಮಾಡಿದ ಶಾಲಾಯುಗದಲ್ಲಿ ಈ ಬಾಲಬೋಧೆ ಬಾಲಕರ ವೇದವಾಗಿತ್ತು. ನಮ್ಮ ಹಿರಿಯ ಗೆಳೆಯರೊಬ್ಬರು ಕೆಲವು ದಿನದ ಹಿಂದೆ, ತಾವು ಆಟ ಊಟ ಓಟ ಕಲಿತದ್ದು ಇವರ ಪುಸ್ತಕದಿಂದ ಎಂದು ಹೇಳಿದರು. ನನ್ನ ಮಾತೂ ಹೀಗೆಯೇ. ವಾಸುದೇವಯ್ಯನವರು ಬಾಲಬೋಧೆಯ ಮೊದಲನೆಯ ಪಾಠದ ನೆನಪೇ ನನ್ನ ಮನಸ್ಸಿನಲ್ಲಿ ಕಾಣುವ ಮೊದಲ ಅಕ್ಷರಗಳ ನೆನಪು. ೧೯೦೦ರಿಂದ ಈಚೆಗೆ ಕನ್ನಡ ಕಲಿತ ಯಾರೇ ಆಗಲಿ ವಾಸುದೇವಯ್ಯನವರ ಎಳೆಯ ಬಳಗ."

ಹೀಗೆ ಹೃದಯಂಗಮವಾದ ನೆನಪುಗಳ ಅಲೆಗಳ ಮೇಲೆ ದಶಕ ದಶಕಗಳಿಂದ ತೇಲುತ್ತ ಬಂದಿರುವ, ಪ್ರಶಂಸೆಯ ಪುಷ್ಪಾಂಜಲಿಯನ್ನು ಪಡೆಯುತ್ತ ಬಂದಿರುವ 'ಕನ್ನಡ ಬಾಲಬೋಧೆ' ಸುಮಾರು ೧೮೭೭ರಲ್ಲಿ, ಶಾಲೆಗೆ ಇನ್ನೂ ಮಠ ಎನ್ನುತ್ತಿದ್ದ ಕಾಲದಲ್ಲಿ, ರಚಿತವಾಗಿ ಅಲ್ಲಿಂದ ಸುಮಾರು ೬೦-೭೦ ವರ್ಷ ಕಾಲ ಪ್ರಾಥಮಿಕ ಶಾಲೆಯ ಮಕ್ಕಳ ಪಠ್ಯಗ್ರಂಥವಾಗಿ ಇದ್ದಂತೆ ತೋರುತ್ತದೆ. ಎಷ್ಟು ಪುನರ್ಮುದ್ರಣಗಳಾದುವೋ ಎಷ್ಟು ಸಾವಿರ ಪ್ರತಿಗಳು ಮುದ್ರಣಗೊಂಡುವೋ ಈ ಮುನ್ನುಡಿಕಾರ ಹೇಳುವ ಸ್ಥಿತಿಯಲ್ಲಿಲ್ಲ. ತಾನು ಸಹ ಇದೇ ಆಟ-ಊಟ-ಓಟದ ಪುಸ್ತಕದಿಂದ ಅಥವಾ ಅದರ ಒಂದು ರೂಪಾಂತರದಿಂದ ಅಕ್ಷರಾಭ್ಯಾಸ ಮಾಡಿದನೆಂದು (೧೯೩೫) ಮಾತ್ರ ಹೇಳಬಹುದಾಗಿದೆ.

ಮೈಸೂರು ವಿದ್ಯಾಭ್ಯಾಸ ಇಲಾಖೆಯಲ್ಲಿ ಈ 'ಕನ್ನಡ ಬಾಲಬೋಧೆ' ಪಠ್ಯವಾಗಿ ನಿಯಮನಗೊಳ್ಳುವುದು ಎಂದಿನಿಂದ ನಿಂತುಹೋಯಿತೋ ನನಗೆ ತಿಳಿಯದು. ಹಾಗೆ ನಿಲ್ಲಿಸಲು ಇಲಾಖೆಗೆ ಅದರದೇ ಆದ ಕಾರಣಗಳಿರಬಹುದು. ಡಿ. ವಿ. ಜಿ. ಅವರು ಬರೆದಿರುವ ಪ್ರಕರಣವನ್ನು ನೋಡಿದರೆ, ಅಶೈಕ್ಷಣಿಕವಾದ ಯಾವುದೋ ಒಂದು

ಕಾರಣವಿರಲೂಬಹುದು ಎನ್ನಿಸುತ್ತದೆ. ಅನಂತರದ ದಶಕಗಳಲ್ಲಿ ಶಿಕ್ಷಣ ಪದ್ಧತಿಗಳೂ ಅಧ್ಯಯನ ಅಧ್ಯಾಪನ ವಿಧಾನಗಳೂ ಕ್ರಾಂತಿಕಾರಿ ಎನ್ನುವಂಥ ಬದಲಾವಣೆಗಳ ಸುಳಿಗಳಲ್ಲಿ ಸಿಕ್ಕಿ ಸುತ್ತುತ್ತಲೇ ಇರುವುದು ತಿಳಿದ ವಿಷಯವೇ ಆಗಿದೆ. ಹೀಗಿರುವಾಗ ಪಠ್ಯಪುಸ್ತಕಗಳ ಸ್ವರೂಪವೂ ಬದಲಾಗುವುದು ಸ್ವಾಭಾವಿಕವೇ. ಪಠ್ಯಪುಸ್ತಕಗಳ ರಚನೆಯಲ್ಲಿ ಸಾಮಾಜಿಕ ಸ್ಥಿತ್ಯಂತರಗಳೂ ವಿಪ್ಲವಗಳೂ ಪರಿಣಾಮ ಬೀರುತ್ತಿವೆ. ಇವಕ್ಕೆ ಸಮರ್ಥನೆಗಳೂ ಆಕ್ಷೇಪಣೆಗಳೂ ಪ್ರಕಟವಾಗುತ್ತಿರುವುದೂ ತಿಳಿದ ವಿಷಯವೇ. ಇವೆಲ್ಲ ಏನೇ ಇದ್ದರೂ ಕನ್ನಡ ಭಾಷೆಯ ಮೂಲದ್ರವ್ಯವಾದ ಶಬ್ದ ಗಳನ್ನು ಕಟ್ಟುವ ಅಕ್ಷರಗಳ ಹಾಗೂ ಕಾಗುಣಿತದ ತಿಳಿವಳಿಕೆ ಸಮಗ್ರವೂ ಸಮೀಚೀನವೂ ಆಗಿರುವ ವಿಷಯದಲ್ಲಿ ಯಾವುದೇ ರಿಯಾಯಿತಿಗೂ ರಾಜಿಗೂ ಅವಕಾಶವಿರಬಾರದು ಎನ್ನುವುದನ್ನು ಇಲ್ಲಿ ಒತ್ತಿ ಹೇಳಬೇಕಾಗಿದೆ. ಸ್ಫುಟವಾದ ಉಚ್ಚಾರಣೆ, ನಿರ್ದುಷ್ಟವಾದ ಬರೆವಣಿಗೆ ಇವನ್ನು ರೂಢಿಸಿಕೊಳ್ಳಲು ಈಗ ಮಕ್ಕಳು ಪಡುವ ಪರಿಶ್ರಮ, ಭರಿಸುವ ಕಷ್ಟ ಮುಂದೆ ಅವರ ಶೈಕ್ಷಣಿಕಜೀವನದ ಶಿಸ್ತಿಗೆ ಬಹುವಾಗಿ ಸಹಾಯ ಮಾಡುತ್ತವೆ ಎಂಬುದು ನಮ್ಮ ಹಳೆಯ ಪೀಳಿಗೆಯ ವಿದ್ಯಾವಂತರ ಅನುಭವದ ಆಧಾರದಿಂದ ದೃಢಪಟ್ಟಿರುವ ಸಂಗತಿಯಾಗಿದೆ. ಎಲ್ಲರೂ ವಿದ್ಯಾವಂತರಾಗಬೇಕು, ನಿಜ; ಆದರೆ ವಿದ್ಯೆ ನೀರುನೀರಾಗಬಾರದು. ನಮ್ಮ ಶಿಕ್ಷಣ ತದ್ಜ್ಞರಿಗೆ, ಅಧ್ಯಾಪಕರಿಗೆ ಇದು ಚೆನ್ನಾಗಿ ತಿಳಿದಿರಬೇಕು. ಪ್ರಸ್ತುತ, 'ಕನ್ನಡ ಬಾಲಬೋಧೆ (೧ನೆಯ ಭಾಗ)' ೧೯೩೬ರ ಆವೃತ್ತಿಯ ಲಭ್ಯಪ್ರತಿಯ ಪುನರ್ಮುದ್ರಣವಾಗಿದ್ದು, ಕಾವ್ಯಾಲಯದ ಕೂಡಲಿ ಕೃಷ್ಣ ಮೂರ್ತಿಗಳು ತಮ್ಮ ಪ್ರಕಾಶನ ಸಂಸ್ಥೆಯ ಮೂಲಕ ಅದನ್ನು ಪ್ರಕಟಿಸಿದ್ದಾರೆ. ಆ ಮೂಲಕ ಅವರು ಈ ಪಠ್ಯಗ್ರಂಥಕ್ಕೆ ಇರುವ ಚಾರಿತ್ರಿಕಮಹತ್ತ್ವವನ್ನು ಮತ್ತೆ ಎತ್ತಿ ಹಿಡಿದಿದ್ದಾರೆ, ಹಳತನ್ನು ನೆನೆದು ಹಂಬಲಿಸುವವರ ಕುತೂಹಲವನ್ನು ಕೊಂಚ ತೃಪ್ತಿ ಪಡಿಸಿದ್ದಾರೆ, ಪುಣ್ಯಶ್ಲೋಕರಾದ ಚ. ವಾಸುದೇವಯ್ಯನವರಿಗೆ ಅವಶ್ಯವಾಗಿ ಸಲ್ಲಬೇಕಾ ಗಿದ್ದ ಋಷಿಋಣವನ್ನು ಸಲ್ಲಿಸಿದ್ದಾರೆ. ಅವರನ್ನು ನಾನು ಅಭಿನಂದಿಸುತ್ತೇನೆ. ಹೀಗೆಯೇ 'ಕನ್ನಡ ಬಾಲಬೋಧೆ'ಯ ಎರಡನೆಯ ಭಾಗವನ್ನು ಅವರು ಪ್ರಕಟಿಸಲಿ ಎಂದು ಹಾರೈಸುತ್ತೇನೆ.

ಈಚೆಯ ಪೀಳಿಗೆಯ ವಿದ್ಯಾವಂತರಿಗೆ ಚ. ವಾಸುದೇವಯ್ಯನವರ ವಿಚಾರಗಳು, ಜೀವನಸಾಧನೆಗಳು ಏನೂ ತಿಳಿದಿಲ್ಲ. ಅವರು ಮರೆತುಹೋದ ಮಹನೀಯರ ಸಾಲಿಗೆ ಸೇರಿ ಹೋಗಿದ್ದಾರೆ. ಹೀಗಾಗಿ ಇಲ್ಲಿ ಅವರ ಬಗೆಗೆ ಕೆಲವು ಪರಿಚಯದ ಮಾತುಗಳನ್ನು

ಬರೆಯುವುದು ಅಪ್ರಸ್ತುತವಾಗದು.

ಚ. ವಾಸುದೇವಯ್ಯನವರು ಹೊಸಗನ್ನಡ ಅರುಣೋದಯ ಕಾಲದಲ್ಲಿ ಕನ್ನಡ ಭಾಷೆ ಸಾಹಿತ್ಯಗಳ ಬೆಳೆವಣಿಗೆಗೆ ಕೆಲಸಮಾಡಿದ ಪ್ರಮುಖರಲ್ಲಿ ಒಬ್ಬರು. ಅವರು ೨-೮-೧೮೫೨ರಲ್ಲಿ ವೆಂಕಟರಾಮಯ್ಯನವರ ಮಗನಾಗಿ ಚನ್ನಪಟ್ಟಣದಲ್ಲಿ ಜನ್ಮ ತಳೆದರು. ಆರಂಭದ ವ್ಯಾಸಂಗ ಅಲ್ಲಿಯ ಎ. ವಿ. ಸ್ಕೂಲಿನಲ್ಲಿ ಆಯಿತು. ಬಳಿಕ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಅನಂತರ ಮೊದಲ ವರ್ಷದ ಎಫ್. ಎ. ತರಗತಿಗೆ ಸೇರಿದರಾದರೂ ಕಾರಣಾಂತರಗಳಿಂದ ಓದು ಮುಂದುವರಿಸಲಾಗಲಿಲ್ಲ. ತಮ್ಮ ೧೯ನೆಯ ವಯಸ್ಸಿನಲ್ಲಿಯೇ ನೌಕರಿಗೆ ಸೇರಿದರು. ಸೆಂಟ್ರಲ್ ಕಾಲೇಜಿನಲ್ಲಿ ಸ್ವಲ್ಪ ಕಾಲ ಉಪಾಧ್ಯಾಯರಾಗಿ ಕೆಲಸ ಮಾಡಿದ ಮೇಲೆ, ಅಂದಿನ ಸರ್ಕಾರದ ವಿದ್ಯಾಭ್ಯಾಸ ಇಲಾಖೆಯ ಇನ್ಸ್ಪೆಕ್ಟರ್ ಜನರಲ್ ಅವರ ಕಛೇರಿಯಲ್ಲಿ ಗುಮಾಸ್ತರಾದರು. ಕ್ರಮೇಣ ಆ ಕಛೇರಿಯ ಮ್ಯಾನೇಜರ್ ಆಗಿ, ಆಫೀಸ್ ಅಸಿಸ್ಟೆಂಟ್ ಆಗಿ ಬಡ್ತಿಪಡೆದು, ೧೯೧೦ ರಲ್ಲಿ ನಿವೃತ್ತರಾದರು.

ವಾಸುದೇವಯ್ಯನವರು ಬೆಂಗಳೂರು ಮಲ್ಲೇಶ್ವರದ ಸಹಕಾರ ಸಂಘದ ಸಂಸ್ಥಾಪಕರಾಗಿ, ಅಲ್ಲಿಯ ಶ್ರೀರಾಮಮಂದಿರದ ಅಧ್ಯಕ್ಷರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಬಹುಕಾಲ ಕೆಲಸಮಾಡಿದರು. ಇವರ ಭಾಷಾ ಸಾಹಿತ್ಯ ಸೇವೆಯನ್ನು ಗುರುತಿಸಿ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದವರು ೧೯೨೬ರಲ್ಲಿ ಇವರನ್ನು ಗೌರವಿಸಿ ಬಿನ್ನವತ್ತಳೆ ಅರ್ಪಿಸಿದರು. ಕನ್ನಡ ಸಾಹಿತ್ಯ ಪರಿಷತ್ತು ೧೯೪೨ರಲ್ಲಿ ಇವರನ್ನು ಸನ್ಮಾನಿಸಿತು. ಅಲ್ಲದೆ ಅವರ ಭಾವಚಿತ್ರವನ್ನು ೨೮-೩-೧೯೪೩ರಂದು ದಿವಾನ್ ಎನ್. ಮಾಧವರಾಯರ ಅಧ್ಯಕ್ಷತೆಯಲ್ಲಿ ಅನಾವರಣಗೊಳಿಸಲಾಯಿತು. ೨೬-೧೨-೧೯೪೩ರಂದು ತಮ್ಮ ೯೨ರ ವೃದ್ಧಾಪ್ಯದಲ್ಲಿ ಚ. ವಾಸುದೇವಯ್ಯನವರು ಬೆಂಗಳೂರಿನ ತಮ್ಮ ಸ್ವಗೃಹದಲ್ಲಿ ತೀರಿಕೊಂಡರು.

ವಾಸುದೇವಯ್ಯನವರ ಮನೆಮಾತು ತೆಲುಗುಭಾಷೆ. ಆದರೆ ಅವರು ಕನ್ನಡ ಸಂಸ್ಕೃತ ಇಂಗ್ಲಿಷ್ ಭಾಷೆಗಳಲ್ಲಿ ಸಹ ಒಳ್ಳೆಯ ಪರಿಶ್ರಮವನ್ನು ಗಳಿಸಿಕೊಂಡಿದ್ದರು. ಅವರು ಸಾಹಿತ್ಯರಚನೆಗೆ ಸಾಕಷ್ಟು ಹಿಂದೆಯೇ ತಮ್ಮ ಕೈತೊಡಗಿಸಿದರು. ೧೮೯೩ರಲ್ಲಿ 'ಸರಳಾರೋಗ್ಯ' ರಚನೆಯಾಯಿತು. ರಜನೀಕಾಂತ ಗುಪ್ತರ ಬಂಗಾಳಿ ಭಾಷೆಯ 'ರಾಜಪುತ್ರ ಮಹಿಮೆ'ಯನ್ನೂ ಸತ್ಯಚರಣ ಶಾಸ್ತ್ರಿಗಳ ಮಹಾರಾಷ್ಟ್ರಾಧಿಪತಿ ಶಿವಾಜಿಯ

ಮಹಾರಾಜನ ಚರಿತ್ರೆಯನ್ನೂ 'ಆರ್ಯಕೀರ್ತಿ' ಭಾಗ ೧ (೧೮೯೬) ಮತ್ತು ಭಾಗ ೨ (೧೮೯೮) ಎಂಬ ಶೀರ್ಷಿಕೆಯಲ್ಲಿ ಅನುವಾದಿಸಿ ಪ್ರಕಟಿಸಿದರು. ಮಹಾಭಾರತದ ಭೀಷ್ಮರ ಚರಿತ್ರೆಯನ್ನು ಸಹ ಬಂಗಾಳಿ ಮೂಲದಿಂದಲೇ 'ಭೀಷ್ಮ ಚರಿತ್ರೆ' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ (೧೯೨೭).

'ಆರ್ಯಕೀರ್ತಿ'ಯಂತೂ ಹೊಸಗನ್ನಡ ಪುನರುಜ್ಜೀವನಕಾಲದ ಯುಗಪ್ರವರ್ತಕ ಗ್ರಂಥಗಳಲ್ಲಿ ಒಂದಾಗಿ ವಿದ್ವನ್ಮಾನ್ಯತೆ ಪಡೆದಿದೆ. ಮಾಸ್ತಿಯವರು ಈ ಪುಸ್ತಕದ ಹಿರಿಮೆಯನ್ನು ಹೀಗೆ ಪ್ರಶಂಸಿಸಿದ್ದಾರೆ: "ಕನ್ನಡದ ಹೊಸಗದ್ಯಕ್ಕೆ ಈ ಪುಸ್ತಕ ಒಂದು ಆದರ್ಶವನ್ನು ಎತ್ತಿ ಹಿಡಿಯಿತು. ಅದರ ಮಾತು, ಆ ಮಾತಿನಲ್ಲಿ ಸಂಸ್ಕೃತ ಬೆರೆತಿದ್ದ ರೀತಿ, ಸಂಸ್ಕೃತವಾಗಲಿ ಕನ್ನಡವಾಗಲಿ ಹಿತವಾಗಿ ಬೆರೆತು ಹರಿದ ಧಾಟಿ" ಇದರಿಂದೆಲ್ಲ ಈ ಪುಸ್ತಕದ ಶೈಲಿ ಅತ್ಯುತ್ತಮ ಎನಿಸಿಕೊಂಡಿತು. ಶೈಲಿಯಂತೆ ಇದರ ವಿಷಯವೂ ಹೊಸಯುಗಕ್ಕೆ ಪ್ರವರ್ತಕವಾಗಿತ್ತು. ದೇಶಾಭಿಮಾನ, ಮಹಾಪುರುಷರ ಆರಾಧನ, ಸರ್ವವಿಧದಿಂದಲೂ ಉದಾತ್ತಭಾವನೆ ಈ ಪುಸ್ತಕದ ತಿರುಳು. ಹೊಸಲೋಕವನ್ನು ಬಯಸಿ ಕಣ್ಣು ತೆರೆಯುತ್ತಿದ್ದ ಕನ್ನಡದ ಹೊಸ ತಲೆಮಾರಿಗೆ ಇದಕ್ಕಿಂತ ಒಳ್ಳೆಯ ಗ್ರಂಥ ಒಂದು ಇದ್ದಿರಲಾರದು. ಇಂಥ ಪುಸ್ತಕವನ್ನು ಕನ್ನಡಕ್ಕೆ ಒದಗಿಸುವ ಅಪೂರ್ವ ಪುಣ್ಯ ವಾಸುದೇವಯ್ಯನವರಿಗೆ ಸೇರಿತು." (ಕನ್ನಡ ನುಡಿ, ೬-೧೩, ೭-೧-೧೯೪೪, ಪು. ೬೧-೬೩).

ಚ. ವಾಸುದೇವಯ್ಯನವರು ವಿದ್ಯಾ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಾಗ ಅವರಿಗೆ ಮೇಲಧಿಕಾರಿಗಳಾಗಿ ಇಲಾಖೆಯ ಮುಖ್ಯಸ್ಥರಾಗಿದ್ದ ಎಚ್. ಭಾಭಾ ಅವರೂ, ಅವರ ತರುವಾಯ ಸರ್ ಸಿ. ರಾಮಲಿಂಗ ರೆಡ್ಡಿಯವರೂ ಆ ಮಹನೀಯರ ಬಗೆಗೆ ವಿಶೇಷ ವಾದ ಗೌರವಾದರಗಳನ್ನು ಇಟ್ಟುಕೊಂಡಿದ್ದರು. ಭಾಭಾ ಸಾಹೇಬರು ವಾಸುದೇವಯ್ಯ ನವರ ಜನ್ಮದಿನವನ್ನು ಗುರುತುಮಾಡಿಟ್ಟುಕೊಂಡು, ಪ್ರತಿವರ್ಷವೂ ಆ ದಿವಸ ಅವರ ಕೈಗೆ ತಲುಪುವಂತೆ ಒಂದು ನೂರು ರೂಪಾಯಿಗಳನ್ನು ಕಳುಹಿಸಿಕೊಡುತ್ತಿದ್ದರಂತೆ.

ಸಿ. ಆರ್. ರೆಡ್ಡಿಯವರು "ಅವರು ನನಗೆ ನಿಜವಾದ ಆಫೀಸಿನ ಗುರುಗಳಾದರು. ಅವರಿಗಿಂತಲೂ ಉತ್ತಮನಡತೆಯ, ಸವಿಮಾತಿನ ಗುರುಗಳು ನನಗೆ ಎಂದಿಗೂ ದೊರೆಯುತ್ತಿರಲಿಲ್ಲ" ಎಂದು ಹೇಳುತ್ತ, ಮುಂದುವರಿದು ಹೀಗೆ ತಿಳಿಸಿದ್ದಾರೆ: "ಪಾಂಡಿತ್ಯ ಬರಹಗಳಿಗಿಂತಲೂ ಮುಖ್ಯವಾಗಿ ಅವರು ಪ್ರೇಮಮಯರು. ವಾಸ್ತವ ವಾಗಿ ಪ್ರೇಮವೆಂಬುದು ವಾಸುದೇವಯ್ಯನವರ ಗುಣಗಳಲ್ಲಿ ಬಹಳ ಪ್ರಧಾನ

ವಾದುದು. ಎಷ್ಟು ದೊಡ್ಡ ಗುಣ, ಎಷ್ಟು ಶ್ರದ್ಧೆ, ಎಷ್ಟು ವಿಶ್ವಾಸ . . . "

"ಎತ್ತರವಾದ ಆಳು, ಸುಂದರವಾದ ವರ್ಚಸ್ಸು, ಸುಷ್ಠು ಆಕೃತಿ, ಗಂಭೀರವಾದ ಆಕಾರ, ನಡೆವಳಿ—ಇವುಗಳಿಂದ ಕೂಡಿದ ಅವರ ದೇಹ ಅವರ ಆಂತರ್ಯವನ್ನು ಪ್ರತಿಬಿಂಬಿಸುತ್ತಿತ್ತು."ಆಕಾರಸದೃಶಃ ಪ್ರಜ್ಞಃ" ಎಂಬ ಮಾತು ಅವರಿಗಾಗಿಯೇ ಸೃಷ್ಟಿಯಾದಂತೆ ಒಪ್ಪುತ್ತಿತ್ತು. ಅವರ ಮಾತುಗಳಲ್ಲಿಯೂ ನಡತೆಯಲ್ಲಿಯೂ ಮಾಧುರ್ಯ ತುಂಬಿ ತುಳುಕುತ್ತಿತ್ತು." ಎಂತಹ ಭವ್ಯವಾದ ಪ್ರಶಂಸೆ! ಈ ಮಹಾನುಭಾವರ ಶೀಲ ಸ್ವಭಾವಗಳ ಉದಾತ್ತತೆಯನ್ನು ಎತ್ತಿ ತೋರಿಸುವ ಕೆಲವು ಹೃದಯಂಗಮ ಸನ್ನಿವೇಶಗಳನ್ನು ಡಿವಿಜಿ ಅವರು ಸಹ ತಮ್ಮ ಜ್ಞಾಪಕಚಿತ್ರದಲ್ಲಿ ನಿರೂಪಿಸಿದ್ದಾರೆ. ಆಸಕ್ತರು ಅವನ್ನು ಗಮನಿಸಬಹುದಾಗಿದೆ. ಹಾಗೆಯೇ ಚ. ವಾಸುದೇವಯ್ಯನವರನ್ನು ಕುರಿತ ಜೀವನಚರಿತ್ರೆ ಸಹ (ಚ. ವಾ. ರಾಘವೇಂದ್ರಯ್ಯ) ನೋಡಬಹುದು.

ಚ. ವಾಸುದೇವಯ್ಯನವರು ತಮ್ಮ ಕಾಲದ ಸಾಹಿತಿಗಳಿಗೆ, ಸಾಹಿತ್ಯಪ್ರೇಮಿಗಳಿಗೆ ತುಂಬ ಬೇಕಾದವರಾಗಿದ್ದರು; ಅವರ ಪ್ರೀತಿ ಗೌರವಗಳನ್ನು ಗಳಿಸಿದವರಾಗಿದ್ದರು. ಸರ್. ಎಂ. ವಿಶ್ವೇಶ್ವರಯ್ಯನವರು ವಾಸುದೇವಯ್ಯನವರ ವಿದ್ಯಾರ್ಥಿಗಳಾಗಿದ್ದರಂತೆ, ಆಗಾಗ ತಮ್ಮ ಗುರುಗಳ ಮನೆಗೆ ಹೋಗಿ ಅವರ ಯೋಗಕ್ಷೇಮ ವಿಚಾರಿಸುತ್ತಿದ್ದರಂತೆ. ಹೀಗೆಯೇ ಸರ್ ಎಂ. ಎನ್. ಕೃಷ್ಣರಾವ್, ಸರ್ ಸಿ. ಆರ್. ರೆಡ್ಡಿ, ಬಿ. ದಾಸಪ್ಪ, ಬಿ. ಎಂ. ಶ್ರೀ, ಎಸ್. ಜಿ. ಶಾಸ್ತ್ರಿ, ಡಿವಿಜಿ., ಮಾಸ್ತಿ ಮೊದಲಾದ ಗಣ್ಯರ ನಡುವೆ ವಾಸುದೇವಯ್ಯನವರು ಹಿರಿತನದ ಮರ್ಯಾದೆ ಪಡೆದಿದ್ದರು. ಬಿ. ಎಂ. ಶ್ರೀಕಂಠಯ್ಯನವರಿಗೆ ಅವರ ೫೮ನೆಯ ವರ್ಷದ ಹುಟ್ಟುಹಬ್ಬದ ಸವಿನೆನಪಿಗೆ ಸಮರ್ಪಿಸಿದ 'ಸಂಭಾವನೆ' ಗ್ರಂಥಕ್ಕೆ ಮೊದಲಲ್ಲಿ ಅವರು ನುಡಿದಿರುವ ಹಿತವಚನದಿಂದ ಚಿಕ್ಕವರ ವಿಷಯದಲ್ಲಿ ಅವರ ಪ್ರೀತಿ ಪ್ರೋತ್ಸಾಹಗಳು ಯಾವ ರೀತಿಯವು ಎನ್ನುವುದನ್ನು ನಾವು ಅರ್ಥಮಾಡಿಕೊಳ್ಳಬಹುದಾಗಿದೆ. ದ. ಕೃ. ಭಾರದ್ವಾಜರು ತಮ್ಮ ಪರಿಚಯ ಲೇಖನದಲ್ಲಿ ಬಿ. ವೆಂಕಟಾಚಾರ್ಯರು, ಚ. ವಾಸುದೇವಯ್ಯನವರು ಮತ್ತು ಎಂ. ಶಾಮರಾಯರು ಈ ಮಹನೀಯರನ್ನು "ಹೊಸಗನ್ನಡಕ್ಕೆ ಹುರುಪನ್ನು ಕೊಟ್ಟ ಹಿಂದಿನ ಆಚಾರ್ಯತ್ರಯರೆಂದು ನಿಸ್ಸಂದೇಹವಾಗಿ ಹೇಳಬಹುದು" ಎಂಬುದಾಗಿ ಬರೆದಿದ್ದಾರೆ.

ಮೈಸೂರು **ಟಿ. ವಿ. ವೆಂಕಟಾಚಲ ಶಾಸ್ತ್ರೀ**

೩೦-೧-೨೦೦೪

# ಪ್ರಕಾಶಕರ ನುಡಿ

ಪ್ರಾತಃಸ್ಮರಣೀಯರಾದ ದಿವಂಗತ ಚ. ವಾಸುದೇವಯ್ಯನವರು ಕನ್ನಡದ ಮಕ್ಕಳಿಗಾಗಿ ಬಹುಹಿಂದೆಯೇ 'ಕನ್ನಡ ಬಾಲಬೋಧೆ'ಯನ್ನು ರಚಿಸಿದ್ದರು. ಇದೊಂದು ಅತಿ ಅಮೂಲ್ಯ ಗ್ರಂಥವಾಗಿದ್ದು ಕನ್ನಡ ಜನ ಇದನ್ನು ಮೇಲಿಂದಮೇಲೆ ಬಯಸುತ್ತಿದ್ದರೂ ಇದರ ಪ್ರತಿಗಳು ದುರ್ಲಭವಾಗಿದ್ದುದರಿಂದ ಇದರ ಪುನರ್ ಮುದ್ರಣಕಾರ್ಯ ಸಾಧ್ಯವಾಗಿರಲಿಲ್ಲ. ಆದರೂ ಈ ಕೃತಿಯನ್ನು ಮತ್ತೆ ಬೆಳಕಿಗೆ ತರಬೇಕೆಂಬ ಅದಮ್ಯ ಬಯಕೆ ಇದ್ದೇ ಇತ್ತು. ಪೂಜ್ಯ ಚ. ವಾಸುದೇವಯ್ಯನವರ ಮೊಮ್ಮಕ್ಕಳಾದ ಶ್ರೀ ಯು. ಬಿ. ಬಾಲಚಂದರ್ ಮತ್ತು ಅವರ ಸೋದರ ಡಾ. ಯು. ಬಿ. ವಾಸುದೇವ (ಫ್ಲಾರಿಡಾ, ಯುಎಸ್‌ಎ) ಅವರ ಪರಿಶ್ರಮದಿಂದಾಗಿ ಈ ಗ್ರಂಥಕ್ಕೆ ಪುನರ್‌ಮುದ್ರಣದ ಯೋಗ ಲಭಿಸಿದೆ. ಶ್ರಮವಹಿಸಿ ಈ ಕೃತಿಯನ್ನು ಪತ್ತೆ ಮಾಡಿ ನನಗೆ ತಂದು ಕೊಟ್ಟುದುದಕ್ಕಾಗಿ ಈ ಸೋದರರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಪುಸ್ತಕವನ್ನು ಡಿ.ವಿ.ಜಿ, ಮಾಸ್ತಿ ವೆಂಕಟೇಶ ಐಯಂಗಾರ್ ಮುಂತಾದ ಆ ಕಾಲದ ಮೇಧಾವಿಗಳೆಲ್ಲರೂ ಓದಿ ಅಪಾರ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ದಿವಂಗತ ಡಾ. ಹಾ ಮಾ ನಾಯಕರನ್ನು ನಾನು ಭೇಟಿಯಾದಾಗಲೆಲ್ಲ ಅವರು 'ಕೃಷ್ಣಮೂರ್ತಿ, ನೀವು ಚ. ವಾಸುದೇವಯ್ಯನವರ ಕನ್ನಡ ಬಾಲಬೋಧೆಯನ್ನು ಎಲ್ಲಿಂದಾದರೂ ಹುಡುಕಿತಂದು ಪ್ರಕಟಿಸಬೇಕು' ಎಂದು ಮೇಲಿಂದ ಮೇಲೆ ಹೇಳುತ್ತಿದ್ದರು. ಅವರ ಆ ಕನಸು ಇಂದು ನನಸಾಗಿದೆ. ಈ ಹೊತ್ತು ನಾನು ಡಾ. ಹಾ ಮಾ ನಾಯಕರನ್ನು ಗೌರವಪೂರ್ವಕವಾಗಿ ನೆನಪಿಸಿಕೊಳ್ಳುತ್ತಿದ್ದೇನೆ.

ಹಿರಿಯರಾದ ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ ಅವರು ಬಹುದೊಡ್ಡ ವಿದ್ವಾಂಸರು. ನಮ್ಮ ಪ್ರಕಾಶನದ ಬಗ್ಗೆ ಅವರಿಗೆ ಅತೀವ ಅಭಿಮಾನವಿದೆ. ನನ್ನ ಬಗೆಗೂ ಅವರು ಪ್ರೀತಿಯನ್ನಿರಿಸಿಕೊಂಡಿದ್ದಾರೆ. ಅವರನ್ನು ಭೇಟಿ ಮಾಡಿ ಈ ಕೃತಿಗೆ ಒಂದು ಮುನ್ನುಡಿಯನ್ನು ಬರೆದುಕೊಡುವಂತೆ ಕೋರಿದೆ. ಅವರು ಕೂಡಲೆ ಒಪ್ಪಿ ತಮ್ಮ ವಿದ್ವತ್ಪೂರ್ಣ ಮುನ್ನುಡಿಯಿಂದ ಈ ಕೃತಿಯ ಮೆರುಗನ್ನು ಹೆಚ್ಚಿಸಿದ್ದಾರೆ. ಮುನ್ನುಡಿಯಲ್ಲಿ ಚ. ವಾಸುದೇವಯ್ಯನವರಿಗೆ ಸಂಬಂಧಿಸಿದ ಅನೇಕ ವೈಯಕ್ತಿಕ ಮಾಹಿತಿಗಳನ್ನು ನೀಡಿ ಉಪಕರಿಸಿದ್ದಾರೆ. ಡಾ. ವೆಂಕಟಾಚಲಶಾಸ್ತ್ರೀ ಅವರಿಗೆ ನಾನು ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ನನ್ನ ಆಪ್ತ ಮಿತ್ರರೂ ನಮ್ಮ ಪ್ರಕಾಶನದ ಬಗ್ಗೆ ಅಭಿಮಾನಿಗಳೂ ಆದ ಶ್ರೀ ಎಚ್. ಎಸ್. ಹರಿಶಂಕರ್ ಅವರು ನನಗೆ ನಮ್ಮ ಪ್ರಕಾಶನಕ್ಕೆ ಅನೇಕ ಕಾರ್ಯಗಳಲ್ಲಿ ಸಹಕರಿಸಿ ಸ್ಪಂದಿಸಿದ್ದಾರೆ, ಅವರಿಗೆ ನಾನು ಅತ್ಯಂತ ಗೌರವದಿಂದ ಕೃತಜ್ಞತೆ ಸಲ್ಲಿಸುತ್ತೇನೆ.

ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್‌ನ ಶ್ರೀ ಮೋಹನಮೂರ್ತಿ ಅವರು ಈ ಕೃತಿಯನ್ನು ಅಂದವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಕೃತಿಯ ಬಾಹ್ಯ ಸೌಂದರ್ಯಕ್ಕೆ ಮೆರಗು ಕೊಟ್ಟವರು ಶ್ರೀ ಚಿನ್ನಸ್ವಾಮಿ ಮತ್ತು ಅವರ ಮಗ ಶ್ರೀ ಆನಂದ್ ಅವರು. ಈ ಮಹನೀಯರಿಗೆ ನಾನು ಋಣಿಯಾಗಿದ್ದೇನೆ.

ಸಾಧ್ಯವಾದಮಟ್ಟಿಗೂ ೧೯೩೬ರಲ್ಲಿ ಮುದ್ರಿತವಾದ ಪುಸ್ತಕದ ಆವೃತ್ತಿಯ ಪುಟ ವಿನ್ಯಾಸವನ್ನೇ ಇಲ್ಲಿಯೂ ಅನುಸರಿಸಲಾಗಿದೆ. ಇದರ ಪ್ರಯೋಜನವನ್ನು ಕನ್ನಡಿಗ ಮಕ್ಕಳೆಲ್ಲರೂ ಪಡೆದರೆ ಈ ಪುಸ್ತಕವನ್ನು ಹೊರತಂದ ನಮ್ಮ ಶ್ರಮ ಸಾರ್ಥಕವಾಗುತ್ತದೆ.

ಮೈಸೂರು **ಚಿದಂಬರಂ ಕೂಡಲಿ ಕೃಷ್ಣಮೂರ್ತಿ**
ಮಾರ್ಚ್ ೧, ೨೦೦೪